# ಅನ್ವೇಷಣೆ

ಸಾಹಿತ್ಯ ಸಾಂಸ್ಕೃತಿಕ ಪತ್ರಿಕೆ

ಬೆಲೆ ರೂ. 5/-

ಸಂಚಿಕೆ 37



ಸಮೂಹ ಶಿಲ್ಪ (ಕೃಪೆ : ಕರ್ನಾಟಕ ಲಲಿತಕಲಾ ಅಕಾಡಮಿ)

**ಈ ಸಂಚಿಕೆಯಲ್ಲಿ :**

ಪ್ರಗತಿಪರ
ವಿಚಾರಗಳಿಗೆ

# ಅನ್ವೇಷಣೆ

ಸಾಂಸ್ಕೃತಿಕ
ಚಟುವಟಿಕೆಗಳಿಗೆ

ಸಂಪುಟ : 6 ಮಾರ್ಚ್–ಏಪ್ರಿಲ್ 90 ಸಂಚಿಕೆ: 37



o 'ಅನ್ವೇಷಣೆ' ಸಾಹಿತ್ಯ – ಸಾಂಸ್ಕೃತಿಕ ಚಟುವಟಿಕೆಗಳಿಗೆ ಮೀಸಲಾದ ದ್ವೈಮಾಸಿಕ.

o ಪ್ರಕಟಣೆಗೆ ಕಳುಹಿಸುವ ಲೇಖನ ವಿಮರ್ಶಾ ಬರಹ, ಕವನಗಳನ್ನು ಆದಷ್ಟು ಟೈಪು ಮಾಡಿ ಕಳುಹಿಸಿ.

o ಅಪ್ರಕಟಿತ ಬರಹ ವಾಪಸ್ಸು ಬೇಕಿದ್ದರೆ ಸಾಕಷ್ಟು ಅಂಚೆ ಚೀಟಿ ಇರಿಸಿ.

o ವಿಳಾಸ ಬದಲಾದರೆ ದಯಮಾಡಿ ತಿಳಿಸಿ.

o ಚಂದಾ ಹಣವನ್ನು M.O. ಇಲ್ಲವೆ D.D. ಮೂಲಕ ಕಳುಹಿಸಿ. ಚೆಕ್ ಕಳುಹಿಸುವಾಗ ರೂ. 5 ಹೆಚ್ಚು ಕಳುಹಿಸಿ.

o ವಾ. ಚಂದಾ ರೂ. 35 (ವ್ಯಕ್ತಿಗಳಿಗೆ) ರೂ. 50 (ಸಂಸ್ಥೆ ಮತ್ತು ಗ್ರಂಥಾಲಯ) 3 ವರ್ಷಕ್ಕೆ ರೂ. 100 (ವ್ಯಕ್ತಿಗಳಿಗೆ) ಆಜೀವ ರೂ. 400 (ವ್ಯಕ್ತಿಗಳಿಗೆ) ರೂ. 500 (ಸಂಸ್ಥೆ/ಗ್ರಂಥಾಲಯಗಳಿಗೆ)

ಸಂಪರ್ಕ ವಿಳಾಸ

ಸಂಪಾದಕ, "ಅನ್ವೇಷಣೆ"
478, 11ನೇ ಎಂ. ಸಿ. ಬಡಾವಣೆ ರಸ್ತೆ,
ವಿಜಯನಗರ, ಬೆಂಗಳೂರು-560 040.

ಪ್ರಿಯರೆ,

''ಅನ್ವೇಷಣೆ'' ಚಂದಾ ಬಾಕಿ ಕಳುಹಿಸಿ ಎಂದು ವೈಯಕ್ತಿಕವಾಗಿ ಎಲ್ಲಾ ಚಂದಾದಾರರಿಗೂ ಬರೆಯಲು ಸಾಧ್ಯವಾಗಿಲ್ಲ. ನೂರಾರು ಮಿತ್ರರಿಗೆ ಪತ್ರಿಕೆ ತಲುಪುತ್ತಿದ್ದರೂ 'ಮೌನ'ವಾಗಿರುತ್ತಾರೆ. ಈಗ ಅಂಥವರು ಪತ್ರಿಕೆ ಬೇಕು/ಬೇಡಗಳ ಬಗ್ಗೆ ದಯವಿಟ್ಟು ತಿಳಿಸಿ. ಪತ್ರಿಕೆ ಬೇಕಿದ್ದವರು ''ಬಾಕಿ'' ಕಳುಹಿಸುವುದರ ಮೂಲಕ ಪತ್ರಿಕೆ ಉಳಿಸಿ ಬೆಳೆಸಲು ಸಹಕರಿಸಿ ಎಂದು ಈ ಮೂಲಕ ಮನವಿ ಮಾಡಿಕೊಳ್ಳುತ್ತಿರುವೆ.

ಜೊತೆಗೆ ಕಾಲೇಜು ಅಧ್ಯಾಪಕ ಮಿತ್ರರಲ್ಲೊಂದು ಮನವಿ: ನಿಮ್ಮ ಕಾಲೇಜು ಗ್ರಂಥಾಲಯಕ್ಕೆ 'ಅನ್ವೇಷಣೆ' ತರಿಸಿಕೊಳ್ಳುವ ವ್ಯವಸ್ಥೆ ಮಾಡಿ-ಬರೆಯಿರಿ.

–ಸಂಪಾದಕ

o 'ಅನ್ವೇಷಣೆ'ಯಲ್ಲಿ ಪ್ರಕಟವಾಗುವ ಬರಹಗಳ ಹೊಣೆ ಆಯಾ ಲೇಖಕರದ್ದು

ಈ ಸಂಚಿಕೆಯ ಲೇಖಕರು/ವಿಳಾಸ

---

o ಎಚ್. ಆರ್. ಅಮರನಾಥ್, ಇಂಗ್ಲಿಷ್ ಉಪನ್ಯಾಸಕರು, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಹಳಿಯಾಳ-581329. ಉ.ಕ-ಜಿಲ್ಲೆ. o ಡಾ॥ಶಂ.ಬಾ. ಜೋಶಿ, ಸಾಧನಕೇರಿ, ಧಾರವಾಡ. o ಡಾ॥ ಕೆ. ಕೇಶವ ಶರ್ಮ ಕನ್ನಡ ಅಧ್ಯಯನ ವಿಭಾಗ, ಸ್ನಾತಕೋತ್ತರ ಕೇಂದ್ರ, ಕುವೆಂಪು ವಿಶ್ವವಿದ್ಯಾಲಯ, ಬಿ. ಆರ್.ಪ್ರಾಜೆಕ್ಟ್ 577115. ಶಿವಮೊಗ್ಗ–ಜಿಲ್ಲೆ. o ಡಾ॥ ಎಚ್. ಎಸ್. ವೆಂಕಟೇಶಮೂರ್ತಿ 101, ಗಣೇಶ ಮಂದಿರ ರಸ್ತೆ, ತ್ಯಾಗರಾಜನಗರ, ಬೆಂಗಳೂರು. o ಶ್ರೀಧರ ಬಿಸ್ಸೆ ಮರಳವಾಡಿ-562121. ಕನಕಪುರ-ತಾ॥ o ಎಂ.ಡಿ. ವಕ್ಕುಂದ c/o ಬಸವರಾಜ ವಕ್ಕುಂದ, ಕ್ರೈಸ್ಟ್ ಕಾಲೇಜು, ಬೆಂಗಳೂರು–560029.

o ಎಸ್. ಉಮಾ, 14ನೇ ಬೀದಿ, ಕೆ.ಟಿ.ಜೆ. ನಗರ, ದಾವಣಗೆರೆ-577002 o ಎಸ್. ಜಿ. ಸಿದ್ಧರಾಮಯ್ಯ, ಕನ್ನಡ ಉಪನ್ಯಾಸಕರು, ಸರ್ಕಾರಿ ಕಲಾ ಕಾಲೇಜು ತುಮಕೂರು-572101. o ಬಳಗುಳಿ ರವೀಂದ್ರಭಟ್, ಬಳಗುಳಿ, ಕೋಲ ಸಿರ್ಸಿ-ಅಂಚೆ ಸಿದ್ದಾಪುರ ತಾ॥ 581355. o ಬಿ. ಚಿನ್ನಸ್ವಾಮಿ, ಎಂ. ಎಫ್. 14/7, ಬಿ. ಟಿ. ಎಂ. (SFHS) ಲೇ ಔಟ್, ಬನ್ನೇರುಘಟ್ಟರಸ್ತೆ ಬೆಂ–560076. o ಮಲ್ಲೇಪುರಂ ಜಿ. ವೆಂಕಟೇಶ್, 1924 (ಕೆ–64) ಮಂಟಪ, 12ನೇ ಕ್ರಾಸ್, 1ನೇ 'ಕೆ' ವಿಭಾಗ ರಾಜಾಜಿನಗರ, ಬೆಂಗಳೂರು-560010. o ಚಿ.ಸು.ಕೃಷ್ಣಸೆಟ್ಟಿ 228, 12ನೇ 'ಎ' ಮುಖ್ಯರಸ್ತೆ, 6ನೇ ಬ್ಲಾಕ್, ರಾಜಾಜಿನಗರ, ಬೆಂಗಳೂರು-10. o ಸು. ರಂ. ಎಕ್ಕುಂಡಿ, ವೆಸ್ಟ್ ಆಫ್ ಕಾರ್ಡ್‌ರಸ್ತೆ, ಬಸವೇಶ್ವರನಗರ ಬೆಂ–79.

# ಉತ್ತಮ ಸಾಹಿತ್ಯ ಕೃತಿಗೆ ಲೇಬಲ್ ಬೇಡ

ಮಾನ್ಯರೇ,

'ಅನ್ವೇಷಣೆ' ಸಂ. 34 ರಲ್ಲಿ ಬಂಡಾಯ 10 ವರ್ಷಗಳ ಪ್ರಶ್ನೋತ್ತರಗಳನ್ನು ಓದಿದೆ. ಬಂಡಾಯ ಸಾಹಿತ್ಯದ ಹತ್ತು ವರ್ಷಗಳ ನಂತರವೂ ಅದರ ಮುಂದಾಳುಗಳಲ್ಲಿ ತಮ್ಮ ಹಕ್ಕನ್ನು ಯಾರೋ ಪ್ರಶ್ನಿಸುತ್ತಿದ್ದಾರೆ ಎಂಬ ಗೂಢವಾದ ಭಯವೋ, ಭ್ರಮೆಯೋ, ಸಂಶಯವೋ ಆಗಾಗ ಹೊಗೆಯಾಡುತ್ತಿರುತ್ತದೆ. ಅದರ ನಿವಾರಣೆಗಾಗಿ ಹೊಸ ಹೊಸ ಪಟ್ಟುಗಳು, ವ್ಯಾಖ್ಯೆಗಳು ಹುಟ್ಟುತ್ತಾ ಬಂದಿವೆ; ಇರಲಿ, ಚಂಪಾ ಅವರು ಅಂಕಿ ಅಂಶಗಳಿಂದ ಬಂಡಾಯಂದ ಉತ್ತಮ ಕಲಾಕೃತಿಗಳನ್ನು (ನವೋದಯ/ನವ್ಯದ ಮೊದಲ ದಶಕದ ಸಾಧನೆಗಿಂತ ಹೆಚ್ಚಿಂದು) ಸಿದ್ಧಮಾಡಬಲ್ಲೆ ಎಂದಿದ್ದಾರೆ. ಇದು ಕೇವಲ ಅತಿ ವಿಶ್ವಾಸದ ಮಾತು. 'ಮತದಾನದಿಂದ' ಸಾಹಿತ್ಯ ಕೃತಿಗಳನ್ನು ಅಳೆಯುವ ದಿನ ಬರದಿರಲಿ!

ಡಾ॥ ಸಿದ್ಧಲಿಂಗಯ್ಯನವರ 'ಪ್ರತ್ಯೇಕ ವಿಮರ್ಶಾಮಾನದಂಡಗಳನ್ನು ಬಯಸುವವರ ಮನಸ್ಸಿನಲ್ಲಿ ಪ್ರಶಂಸೆಯ ನಿರೀಕ್ಷೆ ಮಾತ್ರ ಇರುತ್ತದೆ' ಎಂಬ ಮಾತು ಕಟು ಸತ್ಯ. ಬಂಡಾಯದ ಶ್ರೇಷ್ಠ ಕೃತಿ ಯಾವುದು ಎಂಬ ಬಗ್ಗೆ ಸುಮಾರು ವರ್ಷಗಳಿಂದ ಗಾಳಿಯಲ್ಲಿ ಗುಲ್ಲೆದ್ದಿದೆ. ಉತ್ತಮ ಸಾಹಿತ್ಯವನ್ನು ಇದು ನವೋದಯ/ಪ್ರಗತಿಶೀಲ/ನವ್ಯ/ಬಂಡಾಯ/ದಲಿತವೆಂದು ಲೇಬಲ್ ಹಚ್ಚಿ ವಿಂಗಡಿಸುವುದೇ ಹಾಸ್ಯಾಸ್ಪದವಾದದ್ದು. ಉತ್ತಮ ಸಾಹಿತ್ಯಕ್ಕೆ ಸಾಮಾಜಿಕ ಮೀಸಲಾತಿಯ *Parametre* ಅನ್ವಯಿಸಲು ಆಗಲಾರದೆಂದು ನನ್ನ ಅನಿಸಿಕೆ.

-ಮು. ಅ. ಶ್ರೀರಂಗ
ಚನ್ನಪಟ್ಣ, 571501.

o ಪ್ರಿಯ ನಾಗರಾಜ್,

'ಅನ್ವೇಷಣೆ' ಸಂ. 33 ಮತ್ತು 34 ತಲುಪಿವೆ. ಬಂಡಾಯದ ಹತ್ತು ವರ್ಷಗಳ ಕುರಿತು ವಿಶೇಷಾಂಕ ತಂದು ಸರಿಯಾದ ಕಾರ್ಯ ಮಾಡಿದ್ದೀರಿ. ಹೊಸ ಸಾಹಿತ್ಯ ಚಳವಳಿಯ ಮುಖವಾಣಿಯಾಗಿ 'ಅನ್ವೇಷಣೆ' ಬೆಳೆಯುತ್ತಿರುವುದು ಸಂತೋಷ. ಡಾ॥ ರಹಮತ್ ತರೀಕೆರೆ ಅವರ "ಬಂಡಾಯ ಕಾವ್ಯದ ತಾತ್ವಿಕ ನೆಲೆಗಳು-ಒಂದು ಹಿನ್ನೋಟ" ಲೇಖನ ಬಹಳ ಅರ್ಥಪೂರ್ಣವಾಗಿದೆ,

–ಡಾ॥ ಬಸವರಾಜ ಸಬರದ
ಗುಲಬರ್ಗಾ–585106

(ಅನ್ವೇಷಣೆ ಯಾವುದೇ ಸಾಹಿತ್ಯ ಚಳವಳಿಯ ಮುಖವಾಣಿ ಅಲ್ಲ. ಬಂಡಾಯ ಧೋರಣೆಯ ಬರಹಗಳನ್ನು ಪತ್ರಿಕೆಯ ಹುಟ್ಟಿನಿಂದಲೂ ಪ್ರಕಟಿಸುತ್ತಾ ಬಂದಿರುವುದಂತೂ ನಿಜ. ಹಾಗೆಂದು ಬಂಡಾಯದವರೆಲ್ಲಾ ಈ ಪತ್ರಿಕೆಯನ್ನು 'ಒಪ್ಪಿ'ಕೊಂಡಿಲ್ಲ – ಸಂಪಾದಕ)

o ಅನ್ವೇಷಣೆ-34 ತಲುಪಿತು. ಬಂಡಾಯದ ಬಗೆಗಿನ ಅದರ ಬರಹಗಳನ್ನು ನೋಡುತ್ತಿದ್ದಂತೆ ಸಂ. 33 ನ್ನು ಓದಿಲ್ಲ ಎಂದು ನೆನಪಾಯಿತು... ಸಂ. 33 ಕೂಡಾ ಹಲಕಾರಿಯಾಗಿರುವಂತೆ ತೋರುತ್ತದೆ, ಕಳುಹಿಸಿಕೊಡಿ. ಬಂಡಾಯ ಸಾಹಿತ್ಯದ ಬಗ್ಗೆ ಆಗಲೇಬೇಕಾಗಿದ್ದ ಕೆಲಸವನ್ನು ಮಾಡಿದ್ದೀರಿ.

-ಎಚ್. ಆರ್. ಅಮರನಾಥ್
ಹಳಿಯಾಳ-581329

o 'ಅನ್ವೇಷಣೆ' ಸಂಚಿಕೆಯಲ್ಲಿ ನನ್ನ ಲೇಖನ ಮತ್ತು ಉತ್ತರವನ್ನು ಪ್ರಕಟಿಸಿರುವುದಕ್ಕೆ ತುಂಬಾ ಥ್ಯಾಂಕ್ಸ್. ಬಂಡಾಯ ಹತ್ತು ವರ್ಷ : ಪ್ರತಿಕ್ರಿಯೆಗಳು- ತುಂಬಾ ಸಾರ್ಥಕವಾಯಿತು. ಇಷ್ಟೊಂದು ದೃಷ್ಟಿಕೋನಗಳು, ಮೌಲ್ಯಮಾಪನ, ತಿಳುವಳಿಕೆ ಬಂ. ಸಾಹಿತ್ಯದ ಬಗೆಗೆ ಪ್ರಕಟವಾಗಿರುವುದು ಬಹಳ ಉಪಯುಕ್ತವಾಗಿದೆ. ಈ ಪ್ರಯತ್ನಕ್ಕಾಗಿ 'ಅನ್ವೇಷಣೆ'ಯನ್ನು ಅಭಿನಂದಿಸಲೇಬೇಕು. ಇದು ಪುಸ್ತಕ ರೂಪದಲ್ಲಿ ಹೊರಬಂದರೆ ಇತಿಹಾಸದಲ್ಲಿ ಉಳಿಯುವಂಥ ಪ್ರಯತ್ನವಾಗುತ್ತದೆ.

-ಡಾ॥ ರಹಮತ್ ತರೀಕೆರೆ
ಶಿವಮೊಗ್ಗ

o ...ಬಂಡಾಯ ಹತ್ತು ವರ್ಷಗಳ ಕುರಿತ ಪ್ರಶ್ನೋತ್ತರ ಚನ್ನಾಗಿವೆ. ಕೆಲವು ಚಿಂತನೀಯ ಉತ್ತರಗಳೂ ಇವೆ.

-ಮಲ್ಲೇಪುರಂ ಜಿ. ವೆಂಕಟೇಶ್
ಬೆಂಗಳೂರು-560 010

o 'ಅನ್ವೇಷಣೆ' ಸಂ. 33ರಲ್ಲಿ ಡಾ. ಆರ್ಕೆ ಅವರ ಪ್ರತಿಕ್ರಿಯೆ (ಅಭಿಪ್ರಾಯ) ಓದಿದೆ. ಬರಹದಲ್ಲಿ ವಿವಾದಾಸ್ಪದ ಸಂಗತಿ ಇದ್ದರೂ ಹೆಚ್ಚು ವಸ್ತುನಿಷ್ಠವಾಗಿದೆ ; ಮತ್ತು ನಮ್ಮ ಬಂಡಾಯ ಸಂಘಟನೆ ಅದನ್ನು ಗಂಭೀರವಾಗಿ ಸ್ವೀಕರಿಸಲೇಬೇಕು. ಅದು ಸಂಘಟನೆಯ ಬೆಳವಣಿಗೆಗೆ ಸಹಾಯಕ.

-ಆರ್. ವಿ. ಭಂಡಾರಿ
ಅರೆ ಅಂಗಡಿ (ಉ. ಕ.)

o ಸಂಚಿಕೆ 34ರಲ್ಲಿ ಮೂಡಿಬಂದ ನಿಮ್ಮ "ಲಾಲ್‌ಬಾಗ್ ತುಣುಕುಗಳು" ಮನ ಮುಟ್ಟಿದವು. ಒಂದಕ್ಕಿಂತಲೂ ಇನ್ನೊಂದು ಸಿಹಿಯಾಗಿ ರಸಗುಲ್ಲ ತರಹ ಬಾಯಿ ಚಪ್ಪರಿಸುವಂತಿದ್ದವು. ಅಭಿನಂದನೆಗಳು.

-ಅಮೃತೇಶ್ವರ ತಂಡಕ
ಅಣ್ಣಿಗೇರಿ-582201

o ಒಂದು ಸಾಂಸ್ಕೃತಿಕ ಸಂದರ್ಭದಲ್ಲಿ ಯಾವುದೇ ವಿವಾದಕ್ಕೂ 'ಅನ್ವೇಷಣೆ' ಪ್ರತಿಕ್ರಿಯಿಸಿ ತನ್ನ ಜವಾಬ್ದಾರಿಯನ್ನು ಚೆನ್ನಾಗಿ ನಿರ್ವಹಿಸುತ್ತಿದೆ. ಅದಕ್ಕಾಗಿ ನಿಮಗೆ ಅಭಿನಂದನೆಗಳು.

–ಕೆ. ಎಸ್. ಭಗವಾನ್
ಮೈಸೂರು-23

o ನೀವು ಹೇಳಿದಂತೆ ಚಂದಾದಾರರು ಚಂದಾ ಕಳುಹಿಸದೆ ತೆಪ್ಪಗುಳಿದರೆ ಯಾವ ಚಟುವಟಿಕೆಯೂ ಆರೋಗ್ಯಕರವಾಗಿ ಬೆಳೆಯಲಾರದು.

–ಎಂ. ಜಿ. ವಾರಿ
ಬಾದಾಮಿ-587201

o ಅನ್ವೇಷಣೆ- 33 ವಿಶೇಷ ಸಂಚಿಕೆ ನೋಡಿದೆ. ಬಂಡಾಯ ಕುರಿತ ಚರ್ಚೆ ಕುತೂಹಲಕರವಾಗಿದೆ. ಸುಮಾರು 5-6 ವರ್ಷಗಳಿಂದ ಸಾಹಿತ್ಯವಲಯದಿಂದ ನಾನು ದೂರ ಉಳಿದಿದ್ದು, ಈಗ ಮತ್ತೆ ತೊಡಗಿಸಿಕೊಳ್ಳಬೇಕೆನಿಸುತ್ತಿದೆ. 'ಅನ್ವೇಷಣೆ'ಯ ಹಿಂದಿನೆಲ್ಲಾ ಸಂಚಿಕೆಗಳು ಲಭ್ಯವಿದ್ದಲ್ಲಿ ದಯಮಾಡಿ ಕಳಿಸಿಕೊಡಿ-ಬಿಲ್‌ನೊಂದಿಗೆ ಅಥವಾ ವಿ. ಪಿ. ಪಿ. ಮೂಲಕ.

–ಎಸ್. ಶಿವಾನಂದ
ಕುವೆಂಪು ವಿಶ್ವವಿದ್ಯಾಲಯ, ಬಿ. ಆರ್. ಪ್ರಾಜೆಕ್ಟ್

---

# ಅನ್ವೇಷಣೆ ಹಳೆಯ ಸಂಚಿಕೆಗಳು ಲಭ್ಯ

ಸಾಹಿತ್ಯ – ಸಾಂಸ್ಕೃತಿಕ ಕ್ಷೇತ್ರದ ಮಹತ್ವದ ದಾಖಲೆಯನ್ನೊಳಗೊಂಡ ಹಳೆಯ ಅನ್ವೇಷಣೆ ಸಂಚಿಕೆಗಳನ್ನು ನೀವೀಗ ಪಡೆಯಬಹುದು.

ಮೊದಲ 3 ಸಂಚಿಕೆಗಳು ಮತ್ತು 5–6 ಸಂಚಿಕೆಗಳನ್ನು ಬಿಟ್ಟು, ಇದು ವರೆಗೂ ಪ್ರಕಟವಾಗಿರುವ ಎಲ್ಲಾ 'ಅನ್ವೇಷಣೆ' ಸಂಚಿಕೆಗಳೂ ನಮ್ಮಲ್ಲಿ ಸಿಕ್ಕುತ್ತವೆ. ಸಂಚಿಕೆ ಬೇಕಿದ್ದವರು ವಿವರಗಳಿಗೆ ಬರೆಯಿರಿ.

–ಸಂಪಾದಕ, 'ಅನ್ವೇಷಣೆ'

---

# ಸಮೂಹ ಶಿಲ್ಪ : ವಿವಿಧತೆಯಲ್ಲಿ ಏಕತೆ

'ವಿವಿಧತೆಯಲ್ಲಿ ಏಕತೆ' – ಕರ್ನಾಟಕ ಲಲಿತಕಲಾ ಅಕಾಡೆಮಿ ತನ್ನ ರಜತ ಮಹೋತ್ಸವದ (1988) ಅಂಗವಾಗಿ ಕೈಗೊಂಡ ಒಂದು ಹೊಸ ಪ್ರಯೋಗಕ್ಕೆ, ಭಾರತದಲ್ಲಿ ಇದುವರೆಗೆ ಕಾಣ ಬರದ ಅಪೂರ್ವ ಪ್ರಥಮ ಪ್ರಯತ್ನಕ್ಕೆ ಆಧಾರವಾಗಿ ಸೂಚಿಸಿದ ಹಾಗೂ ಮೂಲ ಸ್ಫೂರ್ತಿಯಾಗಿ ಕಲ್ಪಿಸಿಕೊಂಡ ವಿಷಯವಾಗಿದೆ. ಆದರೆ ಅರಳಿ ನಿಂತಿರುವುದು ಹಲವು ಶಿಲ್ಪಿಗಳ ಸತ್ವಪೂರ್ಣ ಪ್ರತಿಭೆಯ ಶಿಲ್ಪಗುಚ್ಛ. ಅದಕ್ಕೆ ಹಲವು ಸ್ತರದ ಅರ್ಥ, ವೈವಿಧ್ಯಪೂರ್ಣ ಅನುಭವದ ಮುಖಗಳು.

'ವಿವಿಧತೆಯಲ್ಲಿ ಏಕತೆ' ಭಾರತೀಯ ಬದುಕಿನ, ಭಾರತೀಯ ಸಂಸ್ಕೃತಿಯ ವೈಶಿಷ್ಟ್ಯ. ಹಲವು ಬಗೆಯ ಜೀವನ ವಿಧಾನ, ಹಲವು ಸಂಪ್ರದಾಯ, ಹಲವು ಭಾಷೆ, ಹಲವು ಮತ ಧರ್ಮ ನಂಬಿಕೆಗಳು. ಆದರೆ ಎಲ್ಲವೂ ಲಯಬದ್ಧವಾಗಿ ಅರ್ಥಪೂರ್ಣ ಬದುಕಿನ ಆದರ್ಶದತ್ತ ಏಕಮುಖಿ. ದಳದಳ ಪುಷ್ಪಪುಷ್ಪ ಕೂಡಿ ರೂಪತಳೆದಿರುವ ಈ ಶಿಲ್ಪ ಸಮುಚ್ಚಯವೂ ಅದರ ಸಂಕೇತವಾಗಿದೆ— ಜೀವನದಲ್ಲಿ ಸಾಂಗತ್ಯ ಆಗಿದೆ.

ಭಾರತೀಯ ಕಲೆಗೆ ಸಾವಿರಾರು ವರ್ಷಗಳ ಇತಿಹಾಸವಿದೆ. ಶ್ರೀಮಂತ ಪರಂಪರೆ ಇದೆ. ಹರಪ್ಪಾ-ಮೊಹೆಂಜದಾರೊ ಕಾಲದಿಂದ ಇಪ್ಪತ್ತನೆಯ ಶತಮಾನದ ಅಂಚಿನವರೆಗೆ ವೈವಿಧ್ಯಮಯ ಸಂಪ್ರದಾಯಗಳು, ಶೈಲಿಗಳು, ಹೊರಗಿನ ಒಳಗಿನ ಪರಸ್ಪರ ಪ್ರೇರಣೆ ಪ್ರಭಾವಗಳನ್ನು ಮೈಗೂಡಿಸಿಕೊಳ್ಳುತ್ತ ಭಾರತೀಯ ಶಿಲ್ಪ ತನ್ನ ಅಂತರಿಕ ಸತ್ವವನ್ನು ವಿಶಿಷ್ಟವಾಗಿ ವ್ಯಕ್ತಪಡಿಸುತ್ತ ಬಂದಿದೆ. ನಮ್ಮ ದೇವಾಲಯಗಳು, ಅರಮನೆಗಳು ಶಿಲ್ಪಿ ಸಂಘಗಳ ಪ್ರಯತ್ನದ ಫಲ; ಒಬ್ಬೊಬ್ಬ ಶಿಲ್ಪಿಯ ಕೊಡುಗೆಯಲ್ಲ. ಅಂತೆಯೇ ಈ 'ಸಮೂಹ ಶಿಲ್ಪ' ಸಹ. ಇಲ್ಲಿ ಸಾಂಪ್ರದಾಯಿಕ ಶಿಲ್ಪಿಗಳು, ಆಧುನಿಕ ಶಿಲ್ಪಿಗಳು ಪರಂಪರೆಯ ಶೈಲಿಯಲ್ಲಿ, ನವ ಶೈಲಿಯಲ್ಲಿ ಶಿಲ್ಪಗಳನ್ನು ರಚಿಸಿದ್ದಾರೆ. ತಲೆಯ ಮೇಲೆ ಪಾತ್ರೆ ಹೊತ್ತ ಯಕ್ಷನ ಶಿಲ್ಪದಂತೆ, ಶ್ರಮಜೀವಿ ಬಂಡೆ ಹೊತ್ತ ರೈತನಿದ್ದಾನೆ; ಚದುರಂಗ, ಚೌಕಾಭಾರ, ಹಾವು ಏಣಿಯಾಟ, ಅಳಿಗುಳಿಮಣೆಯಾಟಗಳ ಹಾಸುಗಳಂತೆ ಬಂದೂಕು, ರಾಕೆಟ್ಟುಗಳಿವೆ; ಒಡಲಾಳದ ಹುಂಜ, ಅದರ ಎದೆಯೊಳಗಿನ ಮುಗ್ಧ ಬಾಲಕನಂತೆ ಬಂದೂಕಿನ ಬಾಯಲ್ಲಿ ಗುಬ್ಬಿಗೂಡು ಇದೆ. ಇವೆಲ್ಲವೂ ಲಯಬದ್ಧ ಸಂಯೋಜನೆಯಲ್ಲಿ ವಿಭಿನ್ನ, ವಿವಿಕ್ತವಾದರೂ

ಸಮಗ್ರ ರೂಪ ತಳೆದಿವೆ. ವಿವಿಧತೆ ವಿಭಿನ್ನತೆ ಅಲ್ಲ, ಸಮಗ್ರತೆಯಾಗಬೇಕು ಎಂದು ಧ್ವನಿಸುತ್ತಿವೆ, ಹಾಡುತ್ತಿವೆ.

ಸಮಗ್ರತೆ, ಸಾಂಗತ್ಯ ಇನ್ನೂ ಗಂಭೀರವಾದ ಆಳಸ್ತರದ ಅರ್ಥವನ್ನೂ ಸೂಚಿಸುತ್ತವೆ. ಎರಡು ಶಿರಗಳ ಶಿಲ್ಪದಲ್ಲಿ ಒಂದರ ಮುಖದಲ್ಲಿ ಗಾಂಭೀರ್ಯ, ಇನ್ನೊಂದರಲ್ಲಿ ವ್ಯಂಗ್ಯ. ಆಂತರ್ಯದಂತೆ ಸಮಾಜದ ಆತ್ಮ ವಿಮರ್ಶೆಯೂ ಆಗುತ್ತದೆ. ಬಂದೂಕು, ಬಾಂಬು, ರಾಕೆಟ್ಟುಗಳು ಈ ಸುಂದರ ಜಗತ್ತನ್ನು ವಿನಾಶದ ಅಂಚಿಗೆ ತಳ್ಳುತ್ತಿದ್ದರೂ ಇಂದಲ್ಲ ನಾಳೆ ಒಂದು ಮಾನವನ 'ವಿವೇಕ' ಮೈಲುಗೈ ಪಡೆಯು ಬಹುದು ಎಂಬ ಆಶಯ ಬಂದೂಕಿನಲ್ಲಿ ಗೂಡುಕಟ್ಟಿದ ಪುಟ್ಟ ಹಕ್ಕಿಯು ಹೊಸ ಜೀವನೋತ್ಸಾಹ ಸೂಚಿಸುತ್ತದೆ. ನಾಶದ ಬೂದಿಯಲ್ಲೆ ಜೀವನ ಚಿಗುರೊಡೆಯು ತ್ತದೆ. ಇದು ಭಾರತದ ಕಥೆಯಲ್ಲ, ಒಟ್ಟು ವಿಶ್ವದ ಇತಿಹಾಸ, ಮನುಕುಲದ ಹಾಡು. ಬಾಹ್ಯ-ಅಂತರಂಗಗಳ ಬೆಸುಗೆ, ವಿವಿಧತೆಯಲ್ಲಿ ಏಕತೆ-ಅಂತಿಮವಾಗಿ 'ಜೀವನದಲ್ಲಿ ಸಾಂಗತ್ಯ'ದ ಅದ್ಭುತ ಕಲ್ಪನೆ.

ಆವಲಹಳ್ಳಿ, ಕೊಯಿರಾಗಳಿಂದ ಸಾಗಿಸಿ ತಂದ ಬಹುಭಾರವಾದ ಒರಟಾದ ಕಗ್ಗಲ್ಲು ಕಠಿಣ ಶಿಲೆಯಲ್ಲಿ 28 ಶಿಲ್ಪಗಳನ್ನು ರಚಿಸಲಾಗಿದೆ. ನಡುವಣ ಶಿಲ್ಪದ ಎತ್ತರ ಇಪ್ಪತ್ತೊಂದು ಅಡಿಗಳು. ಅದರ ನಾಲ್ಕೂ ಮುಖಕ್ಕೆ ವಿವಿಧ ಎತ್ತರಗಳಲ್ಲಿ ಇತರ ಶಿಲ್ಪಗಳು ಚಾಚಿ ನಿಂತಿವೆ. ಶಿಲ್ಪಗಳ ಒಟ್ಟು ತೂಕ ನೂರು ಟನ್ ಆಗುತ್ತದೆ ಸುತ್ತಲೂ ಹಸಿರು ತುಂಬಿದ ಉದ್ಯಾನವನದ ಹರವು. ಶಿಲ್ಪ ಮಾಧ್ಯಮವಾದ ಕಠಿಣ ಶಿಲೆಯಷ್ಟೆ ದೃಢಕಾಯನಾದ ರೈತನ ಶಿಲ್ಪ, ಕೇಂದ್ರದಲ್ಲಿ ಅತ್ಯಂತ ಎತ್ತರಕ್ಕೆ ಗಗನ ಚುಂಬಿಯಾಗಿ ಭಾರತದ ದೃಢತೆಗೆ, ಸಮಗ್ರತೆಗೆ, ಭವಿಷ್ಯದ ಆಶಯಕ್ಕೆ ಮೂಲಾಧಾರ ವಾದ ಶ್ರೀಸಾಮಾನ್ಯನ ಸಂಕೇತವಾಗಿ ನಿಂತಿದೆ. ಇದು ಶಿಲೆಯಲ್ಲಿನ ಸಾಂಗತ್ಯ.

ಕರ್ನಾಟಕ ಲಲಿತಕಲಾ ಅಕಾಡೆಮಿಯ ಅಧ್ಯಕ್ಷ ಆರ್. ಎಂ. ಹಡಪದ್ ಅವರ ಕಲ್ಪನೆಯ ಕೂಸಾದ ಈ ಶಿಲ್ಪನಿರ್ಮಾಣದ ನೇತೃತ್ವ ವಹಿಸಿದವರು ಶಿಲ್ಪಿ ಡಿ. ವಾದಿರಾಜ್ ಅವರು. ಹನ್ನೆರಡಕ್ಕೂ ಮಿಕ್ಕು ಪ್ರತಿಭಾವಂತ ರೂವಾರಿಗಳು ಯಾವುದೇ ಬಗೆಯ ಫಲಾಪೇಕ್ಷೆ ಇಲ್ಲದೆ ಶಿಲ್ಪ ನಿರ್ಮಾಣದಲ್ಲಿ ಭಾಗಿಯಾಗಿದ್ದಾರೆ. ಕಲಾನಿರ್ಮಾಣವನ್ನೆ ಏಕೈಕ ಗುರಿಯಾಗುಳ್ಳ ಅವರೆಲ್ಲರ ಸಾಮೂಹಿಕ ಪ್ರಯತ್ನದ ಫಲವಾಗಿ ನಗರದ ಕೇಂದ್ರ ಸ್ಥಳವಾದ ಕಲಾಕ್ಷೇತ್ರದ ಪಕ್ಕದ ಆವರಣದಲ್ಲಿ ಮೂಡಿ ಅರಳಿರುವ ಈ ಪರಿಸರ ಶಿಲ್ಪವು ಸಮೂಹ ಶಿಲ್ಪ ಮಾತ್ರವಲ್ಲದೆ ಜನ ಸಮುದಾಯ ಶಿಲ್ಪವೂ ಆಗಿದೆ. ಇದು ಕರ್ನಾಟಕ ಲಲಿತಕಲಾ ಅಕಾಡೆಮಿ ಬೆಳ್ಳಿಹಬ್ಬದ ಸಂದರ್ಭ ದಲ್ಲಿ ರಾಷ್ಟ್ರಕ್ಕೆ ನೀಡಿದ ಕಾಣಿಕೆಯಾಗಿದೆ.

# ಶಂಬಾ : ಕೆಲವು ಟಿಪ್ಪಣಿಗಳು*

–ಎಚ್. ಆರ್. ಅಮರನಾಥ

**ಭಾಗ I. ಶಂಬಾ ಬಗ್ಗೆ ಪ್ರಚಲಿತವಿರುವ ಕೆಲವು ತಪ್ಪು ಅಭಿಪ್ರಾಯಗಳು**

1. **ನಾಸ್ತಿಕರು :** ಶಂಬಾ ನಾಸ್ತಿಕರಲ್ಲ. ದೇವರ ಬಗ್ಗೆ ಅರಿಸ್ಟಾಟಲ್ ಹೇಳಿದ unmoved mover of the universe ಎಂಬ ವ್ಯಾಖ್ಯೆ ಅವರಿಗೆ ಮಾನ್ಯವಿದೆ. ವಿಶ್ವನಿಯಂಮ ಎಂಬುದು ಒಂದು ಇದೆಯೆಂದು ಅವರು ಒಪ್ಪುತ್ತಾರೆ. ಈ ವಿಷಯದಲ್ಲಿ ಐನ್‌ಸ್ಟೀನ್‌ರನ್ನು ಉಲ್ಲೇಖಿಸುತ್ತಾರೆ.

2. **ರತಿ ವಿಷಯಾಸಕ್ತರು** (sex-obsessed) **:** ಶಂಬಾ ರತಿ ವಿಷಯಾಸಕ್ತರಲ್ಲ. ನಮ್ಮ ವಿಚಾರ-ಆಚಾರಗಳಲ್ಲಿ, ದೈವತ ಪ್ರತಿಮೆಗಳಲ್ಲಿ ಇರುವ ಲೈಂಗಿಕ ಅರ್ಥದ ಮೇಲೆ ಬೆಳಕು ಚೆಲ್ಲುವ ಪ್ರಯತ್ನ ಅವರದು. ಲೈಂಗಿಕತೆಯನ್ನು ಮನುಷ್ಯ ಜೀವನದ ಕೇಂದ್ರವನ್ನಾಗಿ ಗ್ರಹಿಸುವುದನ್ನು ಅವರು ವಿರೋಧಿಸುತ್ತಾರೆ. ಫ್ರಾಯ್ಡ್‌ನ ಸಂಶೋಧನ—ವ್ಯಾಖ್ಯಾನ ರೀತಿ ಅವರದಲ್ಲ. ಡಿ. ಎಚ್. ಲಾರೆನ್ಸ ನನ್ನಾಗಲೀ, ಅವನು ಹೇಳುವ blood and brain conflict ಅನ್ನಾಗಲೀ ಅವರು ಉಲ್ಲೇಖಿಸುವುದಿಲ್ಲ. ರಜನೀಶನ ಮುಕ್ತ ಕಾಮದ ಬಗ್ಗೆ ಅವರ ವಿರೋಧ ವಿದೆ. ದಾಂಪತ್ಯ ಧರ್ಮವನ್ನು ಶಂಬಾ ಗೌರವಿಸುತ್ತಾರೆ.

3. **ಕ್ರಾಂತಿಕಾರಿ :** ಆರ್ಥಿಕತೆ ಅಥವಾ ವರ್ಗಕಲಹವಾಗಲೀ, ವರ್ಗ-ವರ್ಣ ಜಾತಿಗಳಾಗಲೀ ಶಂಬಾ ವಿಚಾರಗಳ ತಳಹದಿಯಲ್ಲ. ಹಾಗಾಗಿ ಇವರು ಮಾರ್ಕ್ಸ್

*ದಿ. ೮-೨-೮೭ರಂದು ನಾನು, ಶ್ರೀನಿವಾಸ ದೇಶಪಾಂಡೆ ಮತ್ತು ಡಾ. ಪ್ರಮೋದಗಾಯಿ ಡಾ. ಶಂಬಾ ಜೋಶಿಯವರ ಸಂದರ್ಶನ ತೆಗೆದುಕೊಂಡೆವು. ಸುಮಾರು ೨-೪೫ ಗಂಟೆಗಳ ಈ ಸಂದರ್ಶನವನ್ನು ಧ್ವನಿಮುದ್ರಿಸಿಕೊಂಡಿದ್ದು ಇದು ಈಗ ಬೆರಳಚ್ಚಿನ ಪ್ರತಿಯಾಗಿ ಸಿದ್ಧವಾಗಿದೆ.

ಸಂದರ್ಶನಕ್ಕಿಂತ ಮೊದಲು ಶಂಬಾ ವಿಚಾರಗಳ ಬಗ್ಗೆ ನಾನು ಮಾಡಿಕೊಂಡ ಈ ಟಿಪ್ಪಣಿಗಳು ಮುಖ್ಯವಾಗಿ ''ವೈವಸತ್ವ ಮನುಪ್ರಣೀತ ಮಾನವ ಧರ್ಮದ ಆಕೃತಿ (೧೯೭೯) ಮತ್ತು ಬುಧನ ಜಾತಕ'' (೧೯೮೦) ಪುಸ್ತಕಗಳ ಮೇಲೆ ಆಧಾರಿತವಾಗಿವೆ. ಈ ಟಿಪ್ಪಣಿಗಳನ್ನು ಮಾಡುವಾಗ ನಾನು ಶಂಬಾ ವಿಚಾರಗಳನ್ನು ಸರಳವಾಗಿ, ಸ್ಪಷ್ಟವಾಗಿ ಗ್ರಹಿಸಲು ಪ್ರಯತ್ನಿಸಿದ್ದೇನೆಯೇ ಹೊರತು ಅವುಗಳನ್ನು ಅನುಮೋದಿಸುವ ಅಥವಾ ಖಂಡಿಸುವ ಉದ್ದೇಶ ಇಲ್ಲಿಲ್ಲ. ಶಂಬಾ ಬರಹಗಳು ಕ್ಲಿಷ್ಟ ಎಂಬ ಸಾರ್ವತ್ರಿಕ ಅನಿಸಿಕೆಯ ಹಿನ್ನಲೆಯಲ್ಲಿ ಈ ಟಿಪ್ಪಣಿಗಳು ಆಸಕ್ತರಿಗೆ ಉಪಯುಕ್ತವಾಗಬಹುದು ಎಂದು ಭಾವಿಸಿದ್ದೇನೆ. –ಲೇಖಕ

ವಾದಿ ಅಥವಾ ಸಮಾಜವಾದಿ ಅಲ್ಲ. ಪ್ರಚಲಿತವಿರುವ ವೈದಿಕ ಸಂಪ್ರದಾಯವನ್ನು ಇವರು ವಿರೋಧಿಸುವುದರಿಂದ ಇವರನ್ನು 'ಬಂಡುಕೋರ ವೈದಿಕ' ಎಂದು ಕರೆಯ ಬಹುದು. ಆದರೆ ಇವರು ವೇದ ವಿರೋಧಿಯಲ್ಲ. ವೇದದಲ್ಲಿಯೇ ಇರುವ ವೈವಸ್ವತ ಮನು ಪ್ರಣೀತ ಮಾನವ ಧರ್ಮವನ್ನು ಇರುವ ಎತ್ತಿ ಹಿಡಿಯುತ್ತಾರೆ.

4. ಬುದ್ಧಿವಾದಿ (Rationalist:)ಶಂಬಾ Reasonಗಿಂತ supra rational intuitionಗೆ ಮಹತ್ವ ಕೊಡುತ್ತಾರೆ. ರ್‍ಯಾಶನಲಿಸ್ಟ್ ಮನೋಧರ್ಮದ ಮಾದರಿ ಎಂದು ಸಾಮಾನ್ಯವಾಗಿ ಗ್ರಹಿಸಲಾಗುವ ಬರ್ಟ್ರೆಂಡ್ ರಸೆಲ್ಲರ ಬಗ್ಗೆ ತಾತ್ವಿಕವಾಗಿ ಮತ್ತು ನೈತಿಕವಾಗಿ (Marriage and Morals ಬಗ್ಗೆ) ಶಂಬಾ ಅವರ ವಿರೋಧವಿದೆ.

ಭಾಗ II ಶಂಬಾ ಏನನ್ನು ವಿರೋಧಿಸುತ್ತಾರೆ ?

1. ವ್ಯಕ್ತಿವಾದಗಳು

2. ದಿವ್ಯಾಧ್ಯಾತ್ಮ ಪಂಥಗಳು (Mystic traditions), ವ್ಯಕ್ತಿಮೋಕ್ಷ.

3. ವಿರಕ್ತ ಸಂಪ್ರದಾಯ : ಆಜನ್ಮ ಬ್ರಹ್ಮಚರ್ಯ, ಸನ್ಯಾಸಗಳಿಗೆ ಶಂಬಾ ಅವರ ವಿರೋಧವಿದೆ. 'ಋಷಿ'ಗಳು ದಾಂಪತ್ಯ ಧರ್ಮಕ್ಕೆ ಬೆಲೆ ಕೊಡುತ್ತಾರೆ, ಆದರೆ 'ಮುನಿ'ಗಳು, 'ವಿರಕ್ತ'ರು ಕೊಡುವುದಿಲ್ಲ ಎಂಬುದೇ ಶಂಬಾ ಅವರ ಸ್ಪಷ್ಟ ವಿಚಾರ.

4. ರಸ ಸಂಪ್ರದಾಯ : ಇದನ್ನು ಶಂಬಾ ಮೂರು ಹಂತಗಳಲ್ಲಿ ವಿರೋಧಿಸುತ್ತಾರೆ–

(ಅ) 'ರಸೋ ವೈಸಃ', 'ರಸಂ ಹ್ಯೇವಾಯಂ ಲಬ್ಧ್ವಾ ಆನಂದೀ ಭವತಿ' ಎಂಬ ತಾತ್ವಿಕತೆ.

(ಆ) ಸಾಹಿತ್ಯದಲ್ಲಿ, ಸಾಹಿತ್ಯ ವಿಮರ್ಶೆಯಲ್ಲಿ ಬರುವ ರಸ ಸಿದ್ಧಾಂತ.

(ಇ) ಜೀವನದಲ್ಲಿ ಮನುಷ್ಯರ ವರ್ತನೆಯಲ್ಲಿ ಕಂಡು ಬರುವ ರಸಿಕತೆ.

5. ಅವತಾರಗಳು, ಪವಾಡಗಳು, ಕಾರಣಿಕರು.

6. ಮಂತ್ರ, ಮಾಟ, ಮಾಯ, ಮೋಡಿ, ಭಾನಾಮತಿ.

7. ಕುಮಾರ-ಕುಮಾರೀ ಸಂಪ್ರದಾಯಗಳು : ಆದಿ ಪುರುಷ ಮತ್ತು ಆದಿ ಮಾತೆಯರ ಆರಾಧನೆ-ಅದಿತಿ, ಆಂಭೃಣಿ, ಎಲ್ಲವ್ವ, ರೇಣುಕೆ, ಸ್ಕಂದ, ಗಣಪತಿ, ಹನುಮಂತ.

8. ಅಭಾವಾತ್ಮಕ ಸಂಕೇತಗಳು : ಕುಮಾರೀಮಾತಾ, ಭಗವಂತ, ಅನೃತ, ವಿದೇಹೀ ಜನಕ.

9. ಓಂಕಾರೋಪಾಸನೆ, ನಾದ ಬ್ರಹ್ಮನ ಆರಾಧನೆ.

10. ಜಲ ಸಂಪ್ರದಾಯ : ನೀರಿನ ಆರಾಧನೆ ಸಾಂಕೇತಿಕವಾಗಿ ಲೈಂಗಿಕ

ರೇತಸ್ಸಿನ ಆರಾಧನೆ ಎಂಬುದು ಶಂಬಾ ಅವರ ವಿಚಾರ.

11. ಶನಿ, ಮರುತರ ಆರಾಧನೆ.

12. ಗುರು ಪರಂಪರೆ : ಗುರುವಿನ ಗುಲಾಮನಾಗುವ ಪರಂಪರೆಯನ್ನು ಶಂಬಾ ವಿರೋಧಿಸುತ್ತಾರೆ. ಪ್ಲೇಟೋನ ಶಿಷ್ಯ ಅರಿಸ್ಟಾಟಲಿನ ವರ್ತನೆಯನ್ನು ಸಮರ್ಥಿಸುತ್ತಾರೆ.

13. ದಾಂಪತ್ಯ ಧರ್ಮವನ್ನು ಅಲ್ಲಗೆಳೆಯುವ ವ್ಯಭಿಚಾರ (adultery) ವನ್ನೂ ನಿಷಿದ್ಧ ಸಂಬಂಧ (incest) ಗಳನ್ನೂ ಶಂಬಾ ವಿರೋಧಿಸುತ್ತಾರೆ.

**ಭಾಗ III. ಶಂಬಾ ಸಿದ್ಧಾಂತ**

ತಮ್ಮ ಸುತ್ತಲಿನ ಸಮಾಜದಲ್ಲಿ ಕಂಡು ಬಂದ ಸಮಾಜ ವಿರೋಧಿ ಆಚಾರ-ವಿಚಾರಗಳ ಮೂಲಬೇರುಗಳನ್ನು ಮೊದಲಿನಿಂದಲೂ ಅರಸುತ್ತ ಬಂದ ಶಂಬಾ **ದೈವ ಸೃತ** ಮನು **ಪ್ರಣೀತ ಮಾನವ** ಧರ್ಮದ **ಆಕೃತಿ** ಮತ್ತು ಬಂಧನ **ಜಾತಕ** ಪುಸ್ತಕಗಳಲ್ಲಿ ತಮ್ಮದೇ ಆದ ಸಿದ್ಧಾಂತಕ್ಕೆ ಬಂದು ತಲುಪಿದ್ದಾರೆ. ತಮ್ಮ ಸಿದ್ಧಾಂತಕ್ಕೆ ಬೆಂಬಲವಾಗಿ ಜೀವಶಾಸ್ತ್ರ (Biology), ಮಾನವ ಶಾಸ್ತ್ರ (anthropology) ತತ್ವಜ್ಞಾನ, ವಿಜ್ಞಾನ ಮುಂತಾದ ಜ್ಞಾನಕ್ಷೇತ್ರಗಳಲ್ಲಿರುವ ಸಿದ್ಧಾಂತಗಳನ್ನು ನಮ್ಮ ಮುಂದಿಡುತ್ತಾರೆ. ತಮ್ಮ ಸಂಶೋಧನೆಯಲ್ಲಿ ಶಬ್ದವ್ಯುತ್ಪತ್ತಿ (Etymology), ಪುರಾಣ ವಿಶ್ಲೇಷಣೆ, ದೈವತ ಪ್ರತಿಮೆಗಳ ವಿಶ್ಲೇಷಣೆ, ಧಾರ್ಮಿಕ ಆಚರಣೆಗಳ ವಿಶ್ಲೇಷಣೆಗಳಿಂದ ಪ್ರಮಾಣಗಳನ್ನು ನೀಡುತ್ತಾರೆ. ಅವರ ಮುಖ್ಯ ಪ್ರಮೇಯ ವನ್ನು ಕೆಳಗಿನಂತೆ ಸಂಗ್ರಹ ರೂಪದಲ್ಲಿ ಮಂಡಿಸಬಹುದು.

1. ಮನುಷ್ಯನನ್ನು ಪ್ರಾಣಿಗಳಿಂದ ಬೇರ್ಪಡಿಸುವ ಗುಣ 'ಪ್ರಜ್ಞೆ. (consciousness of consciousness) ಪ್ರಾಣಿಗಳಿಗೆ ಕೆಲವು ವಿಷಯ ಗಳು ತಿಳಿದಿರುತ್ತವೆಯಾದರೂ ತಿಳಿದಿದೆ ಎಂಬ ತಿಳುವಳಿಕೆ ಇರುವುದಿಲ್ಲ.

2. ಭೂಮಿಯ ಮೇಲೆ ಜೀವಿಗಳ ವಿಕಾಸ ಕ್ರಮದಲ್ಲಿ ವಾನರ ಮತ್ತು ಮಾನವ ಇವೆರಡರ ನಡುವೆ ಒಂದು 'ಕಳೆದು ಹೋದ ಕೊಂಡಿ' (Missing Link) ಇದೆ.

3. ಈ Missing Link ಎಂಬುದು 'ನರ.'

4. 'ನರ'ರಿಗೂ 'ಮಾನವ'ರಿಗೂ ವ್ಯತ್ಯಾಸವಿದೆ. ನರ ತನುಜ (ದೇಹದಿಂದ ಹುಟ್ಟಿದವನು), ಮಾನವ ಮನುಜ (ಮನಸ್ಸಿನಿಂದ ಹುಟ್ಟಿದವನು.) ಮಾನವನ ಮನಸ್ಸು Natural Selection by survival of the fittest ನಿಯಮದಂತೆ ವಿಕಾಸ ಹೊಂದಿಲ್ಲ. Natureನಲ್ಲಿ ಮನಸ್ಸು ಇಲ್ಲ. ನರ ದೇಹದ (ಪ್ರಾಣ, ಲಿಂಗಗಳ) ಪ್ರಚೋದನೆಯಿಂದ ವರ್ತಿಸುತ್ತಾನೆ. ಮಾನವ ಮನಸ್ಸಿನ

ಪ್ರೇರಣೆಯಿಂದ ವರ್ತಿಸಬೇಕು; ಸಮಾಜ ಧರ್ಮವನ್ನು ಪಾಲಿಸಬೇಕು: ಬೆಳಕನ್ನು ಆರಾಧಿಸಬೇಕು. (ಹೆಚ್ಚಿನ ವಿವರಗಳಿಗೆ ಅನುಬಂಧ-1 ನೋಡಿ).

5. ಮಾನವ ಧರ್ಮ ಸಾಂಸ್ಕೃತಿಕ ಉತ್ಕರ್ಷಕ್ಕೂ, ನರಧರ್ಮ ಸಾಂಸ್ಕೃತಿಕ ಅಧಃಪತನಕ್ಕೂ ಕಾರಣವಾಗಿದೆ.

6. ಭಾರತ ದೇಶದಲ್ಲಿ ಮಾನವ ಧರ್ಮದ ಸಂಕೇತಗಳು ವೇದಕಾಲದಲ್ಲಿಯೇ ಇದ್ದವು. ಅವು ಈಗ ಭ್ರಷ್ಟವಾಗಿವೆ. ಇದಕ್ಕೆ ನರಸಂಪ್ರದಾಯದ ಕೈವಾಡವೇ ಕಾರಣ ಎಂದು ಶಂಬಾ ಅನಿಸಿಕೆ (ವಿವರಗಳಿಗೆ ಅನುಬಂಧ-2 ನೋಡಿ).

7. ನರ ಹಾಗೂ ಮಾನವ ಧರ್ಮದ ಸಂಕೇತಗಳನ್ನು ಪ್ರಪಂಚದ ಹಲವು ದೇಶಗಳಲ್ಲಿ ಕಾಣಬಹುದು. (ಅನುಬಂಧ–3 ನೋಡಿ).

8. ಪ್ರಪಂಚದ ಚಿಂತಕರನ್ನು ನರ/ಮಾನವ ಧರ್ಮದ ಪ್ರತಿಪಾದಕರೆಂದು ವರ್ಗೀಕರಿಸುವುದು ಸಾಧ್ಯವಿದೆ. ಅನುಬಂಧ–4 ನೋಡಿ).

ಶಂಬಾ ಅವರ ಈ ಸಿದ್ಧಾಂತದ 1 ಮತ್ತು 2ನೆಯ ಮಾತುಗಳು ಜೀವ ವಿಜ್ಞಾನ, ಮಾನವ ಶಾಸ್ತ್ರಗಳಲ್ಲಿ ಚರ್ಚಿತವಾಗಿದೆ. 7ನೆಯ ಮಾತು ತಮ್ಮ ಸಿದ್ಧಾಂತಕ್ಕೆ ಪೂರಕವಾದ ಪ್ರಮಾಣಗಳನ್ನು ಕಲೆ ಹಾಕುವುದಾಗಿದೆ. 8ನೆಯ ಮಾತು ತಮ್ಮ ದೃಷ್ಟಿಯಿಂದ ಪ್ರಪಂಚದ ಚಿಂತಕರನ್ನು ವಿಂಗಡಿಸುವ ಕೆಲಸವಾಗಿದೆ. ಶಂಬಾ ಅವರ ಸ್ವೋಪಜ್ಞತೆ (originality) ಇರುವುದು 3, 4, 5 ಮತ್ತು 6ನೆಯ ಮಾತುಗಳಲ್ಲಿ. 3ನೆಯ ಮಾತು ಜೀವ ವಿಜ್ಞಾನ, ಮಾನವ ಶಾಸ್ತ್ರಗಳ ಕ್ಲಿಷ್ಟ ಒಗಟಿಗೆ ಉತ್ತರ ಸೂಚಿಸುವ ಮಹತ್ವಾಕಾಂಕ್ಷೆಯಿಂದ ಕೂಡಿದೆ. 6ನೆಯ ಮಾತು ಶಂಬಾ ಅವರನ್ನು ಬಂಡುಕೋರ ವೈದಿಕನನ್ನಾಗಿ ಮಾಡಿದೆ.

6ನೆಯ ಮಾತಿಗೆ ಸಂಬಂಧಿಸಿದಂತೆ ಶಂಬಾ ಅವರ ಹುಡುಕಾಟ 'ಶಿವರಹಸ್ಯ' (1939)ದಿಂದ ಪ್ರಾರಂಭವಾಗಿ, 'ಹಾಲುಮತ ದರ್ಶನ' (1960)ದಲ್ಲಿ ಮುಂದುವರೆದು, 'ಋಗ್ವೇದ ಸಾರಃ ನಾಗ ಪ್ರತಿಮಾ ವಿಚಾರ' (1971) ಎಂಬ ಬೃಹದ್ ಗ್ರಂಥವಾಗಿ ಬೆಳೆಯಿತು. ನಂತರದ 'ಪ್ರವಾಹ ಪತಿತರ ಕರ್ಮಃ ಹಿಂದೂ ಎಂಬ ಧರ್ಮ' (1976), 'ಭಗವದ್ಗೀತೆಯ ಆಶಯ ಅಥವಾ ರಾಜಯೋಗದ ಗುಹ್ಯ ಜ್ಞಾನ' (1977), 'ವೈವಸ್ವತ ಮನುಪ್ರಣೀತ ಮಾನವ ಧರ್ಮದ ಆಕೃತಿ' (1979) ಬುಧನ ಜಾತಕ' (1980) ಮತ್ತು 'ಮಡಿಕೆರೆ ಉಪನ್ಯಾಸ: ಬಿತ್ತಿದ್ದನ್ನು ಬೆಳೆದು, ಕೋ' (1984) ಪುಸ್ತಕಗಳಲ್ಲಿ ಒಂದು ಸಿದ್ಧಾಂತವನ್ನು ಮಂಡಿಸುವತ್ತ ಶಂಬಾ ಮುಂದುವರೆದಿದ್ದಾರೆ. 'ಜೀವನದ ಅರ್ಥಗ್ರಹಣ ಪದ್ಧತಿ' (1986) ಎಂಬ ಸಣ್ಣ ಪುಸ್ತಿಕೆಯಲ್ಲಿ ಶಂಬಾ ಸಂಶೋಧನೆಯಲ್ಲಿ ತಮ್ಮ ಕೆಲವು ದಶಕಗಳ ಅನುಭವದ ಸಾರವನ್ನು ಮುಂದಿಟ್ಟಿದ್ದಾರೆ.

## ಅನುಬಂಧ 1. ನರನಿಗೂ ಮಾನವನಿಗೂ ಇರುವ ವ್ಯತ್ಯಾಸ

| | ನರ ಧರ್ಮ | ಮಾನವ ಧರ್ಮ |
|---|---|---|
| 1 | ವ್ಯಕ್ತಿ ಧರ್ಮ | ಸಮಾಜ ಧರ್ಮ |
| 2 | ವ್ಯಷ್ಟಿ | ಸಮಷ್ಟಿ |
| 3 | ಕಲ್ಪನೆ | ವಿಚಾರ |
| 4 | ಶ್ರದ್ಧೆ | ನಿಷ್ಠೆ |
| 5 | ಬುದ್ಧಿ | ಪ್ರಜ್ಞೆ |
| 6 | ಅನಿವಾರ್ಯದ ಆಯ್ಕೆ | ಯುಕ್ತದ ಆಯ್ಕೆ |
| 7 | ಕರ್ಮ | ಕರ್ತವ್ಯ |
| 8 | ತನುಜ | ಮನುಜ |
| 9 | ಜೀವಿತ ಪಾತಳಿ (ಲೈಂಗಿಕ) | ಜೀವನ ಪಾತಳಿ |
| 10 | ಭೂ:, ಭುವ ಪಾತಳಿ (ಭೂ:—ದೇಹ, ಪ್ರಾಣ) (ಭುವ: ಅಂತರಿಕ್ಷ) | ಸ್ವರ್ ಪಾತಳಿ ಸ್ವರ್—ಪ್ರಜ್ಞೆ |
| 11 | ರೇತ ಸತ್ಯ | ಋತಸತ್ಯ |
| 12 | ದಿವ್ಯಚಕ್ಷು | ಪ್ರಜ್ಞಾನೇತ್ರ |
| 13 | ಪುರಾಣ | ಇತಿಹಾಸ |
| 14 | ವೃತ್ತಾಕಾರದ ಕಾಲಗತಿ | ರೇಖಾಕಾರದ ಕಾಲಗತಿ |
| 15 | ಕತ್ತಲೆಯ ಆರಾಧನೆ | ಬೆಳಕಿನ ಆರಾಧನೆ |
| 16 | ಬ್ರಹ್ಮಚರ್ಯ, ವಿರಕ್ತಿ (ಮುನಿ) | ದಾಂಪತ್ಯ (ಋಷಿ) |
| 17 | ವಾಣಿ | ವಾಕ್ |
| 18 | ಮಾತು | ಭಾಷೆ |

**ಅನುಬಂಧ 2: ಭಾರತದಲ್ಲಿ ನರ ಹಾಗೂ ಮಾನವ ಧರ್ಮಗಳ ಆರಾಧ್ಯ ಸಂಕೇತಗಳು***

| | ನರ ಧರ್ಮ | ಮಾನವ ಧರ್ಮ |
|---|---|---|
| 1 | ಚಂದ್ರ | ಸೂರ್ಯ |
| 2 | ಸ್ವಯಂ ಭೂ ಮನು | ವೈವಸ್ವತ ಮನು |
| 3 | ವಶಿಷ್ಠ, ವಾಲ್ಮೀಕಿ, ವ್ಯಾಸ | ವಿಶ್ವಾಮಿತ್ರ |
| 4 | ನಚಿಕೇತಾಗ್ನಿ | ಜಾತವೇದಾಗ್ನಿ |
| 5 | ಅಗ್ನಿನಾರಾಯಣ | ವೈಶ್ವಾನರಾಗ್ನಿ |
| 6 | ವಿಷ್ಣು (ನಾರಾಯಣ, ನಾಗ, ವೃತ) | ಇಂದ್ರ |
| 7 | ಮೃತ್ಯು: ಕಾಲಿ, ರುದ್ರ, ಕೃಷ್ಣ | ಮೃತ್ಯು : ಯಮಧರ್ಮ |
| 8 | ಅಭಾವಾತ್ಮಕ ಸಂಕೇತಗಳು : (ಕುಮಾರಿ ಮಾತಾ, ಭಗವಾನ್, ಅಮೃತ, ವಿದೇಹಿ ಜನಕ) | |
| 9 | ಜ್ಯೋತಿ (ಜ್ಯೋತಿರ್ಲಿಂಗ, candle light, ಆಪೋ ಜ್ಯೋತಿ) | ಪ್ರಕಾಶ |
| 10 | ಆದಿಮಾತೆ, (ಅದಿತಿ, ಅಂಭೃಣಿ, ರೇಣುಕೆ, ಎಲ್ಲವ್ವ) | |
| 11 | ಆದಿ ಪುರುಷ (ಅತ್ಯತಿಷ್ಠತ್ ದಶಾಂಗುಲಂ) | |
| 12 | ಕುಮಾರ, ಕುಮಾರಿ ಸಂಪ್ರದಾಯಗಳು (ಹನುಮ, ಸ್ಕಂದ, ಗಣಪತಿ) | |
| 13 | ಜಲ ಸಂಪ್ರದಾಯ | |
| 14 | ರಸ ಸಂಪ್ರದಾಯ | |
| 15 | ಶನಿ, ಮರುತ | |
| 16 | ಓಂಕಾರ, ನಾದಬ್ರಹ್ಮ | |
| 17 | ಅವತಾರ , ಪವಾಡ, ಕಾರಣಿಕ | |

ಮಾನವ ಧರ್ಮದ ಪ್ರತಿಯೊಂದು ಸಂಕೇತವೂ **ಈಗ ಭ್ರಷ್ಟ**ವಾಗಿದೆ, ಇದಕ್ಕೆ ಚಾಂದ್ರ (ನರ) ಸಂಪ್ರದಾಯದ ಕೈವಾಡವೇ ಕಾರಣ ಎಂದು **ಶಂಬಾ** ಹೇಳುತ್ತಾರೆ.

1. 'ಸೂರ್ಯ'ನಿಗೆ ಪರ್ಯಾಯವಾಗಿ 'ಆದಿತ್ಯ', 'ಮಾರ್ತಾಂಡ', 'ಸೂರ್ಯನಾರಾಯಣ' ಎಂಬ ಶಬ್ದಗಳನ್ನು ಯೋಜಿಸಿದ್ದು, 'ಸವಿತೃ'ವಿನಿಂದ 'ಸಾವಿತ್ರಿ'ಯನ್ನು ಯೋಜಿಸಿದ್ದು, ಕುಮಾರಿ ಕುಂತಿಗೆ ಸೂರ್ಯ ಪುತ್ರದಾನ ನೀಡಿದನೆಂದು ಕಲ್ಪಿಸಿದ್ದು, ರಾಮಚಂದ್ರನನ್ನು ಸೂರ್ಯವಂಶದವನೆಂದು ನಂಬಿಸಿದ್ದು.

2. ಹದಿನಾಲ್ಕು ಮನುಗಳನ್ನು ಕಲ್ಪಿಸಿದ್ದು, ಸ್ವಯಂಭೂ ಮನುವೇ ಆದ್ಯನೆಂದುನಂಬಿಸಿದ್ದು. ಈಗಿರುವ ಮನುಸ್ಮೃತಿ ಸ್ವಯಂಭೂ ಮನುವಿನದು.

3. 'ವಿಶ್ವ-ಮಿತ್ರ'ನನ್ನು 'ವಿಶ್ವ-ಅ-ಮಿತ್ರ' (ವಿಶ್ವಾಮಿತ್ರ)ನೆಂದು ಮಾಡಿದ್ದು.

4. 'ಜಾತವೇದಾಗ್ನಿ'ಯು 'ನಚಿಕೇತಾಗ್ನಿ'ಯನ್ನು ಹೊಕ್ಕಿತು ಎಂದು ಚಿತ್ರಿಸಿದ್ದು.

5. 'ವಿಶ್ವ-ನರ' (Universal man)—ವೈಶ್ವಾನರಾಗ್ನಿಗೂ ಅಗ್ನಿನಾರಾಯಣನಿಗೂ ಇರುವ ಭೇದ ಅಳಿಸಿದ್ದು.

6. 'ಇಂದ್ರ'ನನ್ನು ಅಹಲ್ಯಾಜಾರನೆಂದು ಚಿತ್ರಿಸಿದ್ದು.

7. ಕೃಷ್ಣ(=ಕಪ್ಪು=ಕತ್ತಲೆ) ಅರ್ಜುನನಿಗೆ(=ಬಿಳುಪು=ಪ್ರಕಾಶ) ಮಾರ್ಗದರ್ಶನ ಮಾಡುವಂತೆ ಕಥೆ ಹೆಣೆದದ್ದು.

## ಅನುಬಂಧ 3 : ಇತರ ದೇಶಗಳ ಸಂವಾದಿ ಸಂಕೇತಗಳು

| | ದೇಶ | ನರ ಧರ್ಮ | ಮಾನವ ಧರ್ಮ |
|---|---|---|---|
| 1 | ಗ್ರೀಕ್ | Titans (ಭೂಮಿಪುತ್ರರು, ಭೌಮಾಸುರರು) ಕ್ರೋನಸ್ (ಶಾಕಾಸುರ) ಅಥೆನಾ (ಅಂಭೃಣಿ) | ಝೀಯೂಸ್ (ಇಂದ್ರ) ಯುರೇನಸ್ (ಆಕಾಶ ತತ್ವ) |
| 2 | ರೋಮನ್ | ಸ್ಯಾಟನ್ (ಶನಿ) | ಜ್ಯುಪಿಟರ್ (ಇಂದ್ರ) |
| 3 | ಇರಾನ್ (ಅವೆಸ್ತಾ) | ಅಹ್ರಿಮನ್ (ನಾಗ, ವೃತ್ತ) | ಅಹುರ ಮಜ್ದ (ಇಂದ್ರ) |
| 4 | ಸುಮೇರಿಯನ್ | (ಎಂಕಿಡು) (ಶೃಂಗಿ, ಮುನಿ) | |
| 5 | ಈಜಿಪ್ತ | 'ಕ' (ಪ್ರಜಾಪತಿ, ಹಿರಣ್ಯಗರ್ಭ) | |

## ಅನುಬಂಧ 4 : ಅ ಶಂಬಾ ಪರಿಭಾಷೆಯ ಸಂವಾದಿ ಪದಗಳು.

| | ಚಿಂತಕರ ಹೆಸರು | ನರ ಧರ್ಮ | ಮಾನವ ಧರ್ಮ |
|---|---|---|---|
| 1 | ಶಂಬಾ ಪರಿಭಾಷೆ | ಭೂರ್ಭುವ ಪಾತಳಿ | ಸ್ವರ್ ಪಾತಳಿ |
| 2 | ಮಾನವ ಶಾಸ್ತ್ರಜ್ಞ ಕ್ರೋಬರನ ಪರಿಭಾಷೆ | Organic level | Super organic level |
| | ಜೀವ ವಿಜ್ಞಾನಿ ಜ್ಯೂಲಿಯನ್ ಹಕ್ಸ್ಲೆಯ ಪರಿಭಾಷೆ | Biosphere | Noosphere |
| 4 | ಬರ್ಗಸನ್ನನ ಪರಿಭಾಷೆ | Infrarational intuition | Suprarational intuition |
| 5 | ವಿಜ್ಞಾನಿ ಐನ್‌ಸ್ಟೀನನ ಪರಿಭಾಷೆ | Personal sphere | Extra personal sphire |
| 6 | ತತ್ವಜ್ಞಾನಿ ಕಾಂಟನ ಪರಿಭಾಷೆ | Phenomena | Noumena |
| 7 | ರಸೆಲ್ ಮತ್ತು ಅರಿಸ್ಟಾಟಲ್ | ಬರ್ಟ್ರಂಡ್ ರಸೆಲ್ಲನ 'Reason' | ಅರಿಸ್ಟಾಟಲನ Nous : mind |
| 8 | ವ್ಯಾರೆಟ್ಟನ ಪರಿಭಾಷೆ | Multitude (ಮಂದಿವಾಳ) | Folk wisdom (ಜಾನಪದ ವಿವೇಕ) |

### (ಆ) ಶಂಬಾ ಪ್ರಕಾರ ಚಿಂತಕರ ಸ್ಥೂಲ ವರ್ಗೀಕರಣ

| ನರಧರ್ಮ | ಮಾನವಧರ್ಮ |
|---|---|
| ಸಾಕ್ರೆಟಿಸ್<br>ಪೈಥಾಗೊರಸ<br>ಪ್ಲೇಟೋ<br>ಆರ್ಫಿಯಸ್ ಪಂಥ<br>ಕ್ರಿಶ್ಚಿಯನ್ ದಿವ್ಯಾಧ್ಯಾತ್ಮ<br>ಹೆಗೆಲ್<br>ಬರ್ಟ್ರಂಡ್ ರಸೆಲ್<br>ಡಾರ್ವಿನ್ | ಅರಿಸ್ಟಾಟಲ್<br>ಡೆಕಾರ್ಟೆ<br>ಕಾಂಟ<br>ವ್ಯಾಲ್ಲಾಸ<br>ಕ್ರೋಬರ್<br>ಜ್ಯೂ. ಹಕ್ಸ್ಲೆ<br>ಐನ್‌ಸ್ಟೀನ್ |

## ಪರಿಶಿಷ್ಟ : ವಶಿಷ್ಠ-ವಿಶ್ವಾಮಿತ್ರ : ಕೆಲವು ಅಭಿಪ್ರಾಯಗಳು

1. ಶಂಬಾ ವಶಿಷ್ಠರನ್ನು ಖಂಡಿಸುತ್ತಾರೆ, ವಿಶ್ವಾಮಿತ್ರರನ್ನು ಬೆಂಬಲಿಸುತ್ತಾರೆ, ವಾಲ್ಮೀಕಿ ಮತ್ತು ವ್ಯಾಸ ವಶಿಷ್ಠ ಪರಂಪರೆಯವರೆಂದು ಶಂಬಾ ಹೇಳುತ್ತಾರೆ, ತ್ರಿಶಂಕು, ಮೇನಕೆ, ಶಕುಂತಲೆ, ಹರಿಶ್ಚಂದ್ರ ಮುಂತಾದವರೊಂದಿಗೆ ವಿಶ್ವಾಮಿತ್ರರ ಕಥೆ ಹೆಣೆದುದನ್ನು ಶಂಬಾ ವಶಿಷ್ಠ ಪರಂಪರೆಯ ಕೈವಾಡವೆನ್ನುತ್ತಾರೆ. ಡಾರ್ವಿನ್ನನನ್ನು ವಶಿಷ್ಠನೆಂದೂ, ವ್ಯಾಲ್ಲಾಸನನ್ನು ವಿಶ್ವಾಮಿತ್ರನೆಂದೂ ಕರೆಯಬಹುದೆಂದು ಶಂಬಾ ಹೇಳುತ್ತಾರೆ.

2. ಕೆ. ಎಸ್. ನಾರಾಯಣಾಚಾರ್ಯರದು ಶಂಬಾ ದೃಷ್ಟಿಗೆ ವಿರುದ್ಧವಾದ ದೃಷ್ಟಿ. ಇವರು ವಶಿಷ್ಠರನ್ನು ಬೆಂಬಲಿಸುತ್ತಾರೆ, ವಿಶ್ವಾಮಿತ್ರರನ್ನು ಖಂಡಿಸುತ್ತಾರೆ. ವಿಶ್ವಾಮಿತ್ರರು ಬ್ರಹ್ಮರ್ಷಿಯಾಗಿ ವಶಿಷ್ಠರ ಮನ್ನಣೆಗೆ ಪಾತ್ರರಾದಾಗ ಮಾತ್ರ ಅವರ ಬಗ್ಗೆ ಗೌರವ ತೋರಿಸುತ್ತಾರೆ. ಇದರಲ್ಲೂ ವಶಿಷ್ಠರ ಔದಾರ್ಯವನ್ನು ಕಾಣುತ್ತಾರೆ. ವಿಶ್ವಾಮಿತ್ರರು ಇವರಿಗೆ ಎಲ್ಲ ಕ್ರಾಂತಿಕಾರಿಗಳ, ಸಮಾಜ ಸುಧಾರಕರ ಸಂಕೇತ. ವಶಿಷ್ಠರು ಪರಂಪರೆಯ ಸಂಕೇತ. ವಿಶ್ವಾಮಿತ್ರರಿಗೆ ಸಂಬಂಧಿಸಿದ ಕಥೆಗಳನ್ನು ಇವರು ಒಪ್ಪಿಕೊಳ್ಳುತ್ತಾರೆ. ವಾಲ್ಮೀಕಿ, ವ್ಯಾಸರು ಈ ಗಳಲ್ಲಿ ನಿರೂಪಿಸಿದ ವೇದಾರ್ಥವನ್ನು ವಿವರಿಸುತ್ತಾರೆ.

(ವೇದ ಸಂಸ್ಕೃತಿಯ ಪರಿಚಯ, ಸಂಪುಟ 5)

3. ಡಾ. ರಾಮಮನೋಹರ ಲೋಹಿಯಾ : "ಮಾತೃ ಹಂತಹ ಪರಶುರಾಮನಿಂದ ರಾಷ್ಟ್ರಹಂತಕ ನೆಹರೂವರೆಗೆ ಮತಾಂಧ ನ್ಯಾಯದ ವಶಿಷ್ಠ ಪರಂಪರೆ ನಡೆದು ಬಂದಿದೆ. ವಿಶ್ವಾಮಿತ್ರನಿಂದ ವಿಶ್ವೇಶ್ವರಯ್ಯರವರೆಗೆ ವಾಲ್ಮೀಕಿಯ ಉದಾರ ಪರಂಪರೆ ವಿಸ್ತರಿಸಿದೆ." ಲೋಹಿಯಾ ದೃಷ್ಟಿಯಲ್ಲಿ ವಿಶ್ವಾಮಿತ್ರ, ವಾಲ್ಮೀಕಿ ಒಂದೇ ಪರಂಪರೆಯವರು. (ಶಂಬಾ ಪ್ರಕಾರ ವಾಲ್ಮೀಕಿ ವಶಿಷ್ಠ ಪರಂಪರೆಯವ). ಮಹಾತ್ಮಾಗಾಂಧಿ, ಅಬ್ದುಲ್ ಗಫಾರಖಾನ ವಿಶ್ವಾಮಿತ್ರನ ರಂಪರೆಯವರು. ಮುರಾರ್ಜಿ ದೇಸಾಯಿ ವಶಿಷ್ಠದ್ವಿಜ, ಸರ್ದಾರ್ ಪಟೇಲ್ ವಶಿಷ್ಠ ಶೂದ್ರ, ವಶಿಷ್ಠ ದ್ವಿಜನಿಗಿಂತ ವಶಿಷ್ಠ ಶೂದ್ರ ಉತ್ತಮ. ಲೋಹಿಯ, ವಾಲ್ಮೀಕಿ-ವಿಶ್ವಾಮಿತ್ರ ಪರಂಪರೆಯನ್ನು ಬೆಂಬಲಿಸುತ್ತಾರೆ, ವಶಿಷ್ಠ ಪರಂಪರೆಯನ್ನು ಖಂಡಿಸುತ್ತಾರೆ.

ಲೇಖನ : 'ವಶಿಷ್ಠರು ಮತ್ತು ವಾಲ್ಮೀಕಿಯರು'. 'ರಾಜಕೀಯದ ಮಧ್ಯೆ ಬಿಡುವು, ಅನು : ಕೆ. ವಿ. ಸುಬ್ಬಣ್ಣ, ಅಕ್ಷರ ಪ್ರಕಾಶನ, ಸಾಗರ, ಮತ್ತು 'ಜಾತಿ ಪದ್ಧತಿ', ಅನು : ಹಸನ್ ನಯೀಂ ಸುರಕೋಡ, ಪತ್ರಿಕೆ ಪ್ರಕಾಶನ, ಬೆಂಗಳೂರು-ಈ ಎರಡು ಪುಸ್ತಕಗಳಲ್ಲಿ ಈ ಲೇಖನವಿದೆ.)

4. ಡಾ. ಪೋಲಂಕಿ ರಾಮಮೂರ್ತಿಯವರು ವಶಿಷ್ಠ ಕಾಂಪ್ಲೆಕ್ಸ್' ವಿಶ್ವಾಮಿತ್ರ ಕಾಂಪ್ಲೆಕ್ಸ್ ಎಂಬ ಮನಶ್ಶಾಸ್ತ್ರೀಯವೆನಿಸುವಂತಹ ಶಬ್ದಗಳನ್ನು ಯೋಜಿಸಿದ್ದಾರೆ. ಇವರ ಪ್ರಕಾರ ವಶಿಷ್ಠ ಬ್ರಾಹ್ಮಣ ಮೌಲ್ಯಗಳ ಪ್ರತಿನಿಧಿ. ವಿಶ್ವಾಮಿತ್ರ ಬ್ರಾಹ್ಮಣೇತರರಲ್ಲಿ ಕಂಡು ಬರುವ ಬ್ರಾಹ್ಮಣೀಕರಣದ ಪ್ರವೃತ್ತಿಯನ್ನು ಪ್ರತಿನಿಧಿಸುತ್ತಾನೆ. ಇವರು ವಶಿಷ್ಠ, ವಾಲ್ಮೀಕಿ ಇಬ್ಬರನ್ನೂ ಖಂಡಿಸುತ್ತಾರೆ.

(ಸೀತಾಯಣ)

5. ಡಾ. ವಿ. ಕೃ. ಗೋಕಾಕರು ತಮ್ಮ ಮಹಾಕಾವ್ಯ 'ಭಾರತ ಸಿಂಧು ರಶ್ಮಿ'ಯಲ್ಲಿ ವಿಶ್ವಾಮಿತ್ರನನ್ನು ಕಥಾನಾಯಕನನ್ನಾಗಿ ಮಾಡಿಕೊಂಡಿದ್ದಾರೆ. ವಶಿಷ್ಠ ವಿಶ್ವಾಮಿತ್ರರಲ್ಲಿ ಸಮನ್ವಯ ದೃಷ್ಟಿಯನ್ನು ಚಿತ್ರಿಸಿದ್ದಾರೆ. (ಉದಾ : ವಶಿಷ್ಠರು ತಮ್ಮ ಅಯೋಗ್ಯಮಗ ಶಕ್ತಿಯ ಬದಲು ವಿಶ್ವಾಮಿತ್ರರೇ ಸುದಾಸನ ಅಶ್ವಮೇಧ ಯಾಗಕ್ಕೆ ಅಧ್ವರ್ಯುವಾಗಬೇಕೆಂದು ಸೂಚಿಸುತ್ತಾರೆ.) ಇವರಿಬ್ಬರಲ್ಲೂ ಮಾನ -ವೀಯ ಸತ್ಯವನ್ನೂ ಚಿತ್ರಿಸಿದ್ದಾರೆ.) ವಿಶ್ವಾಮಿತ್ರರಿಗೆ ಸಂಬಂಧಿಸಿದ ಕಥೆಗಳಲ್ಲಿ ತ್ರಿಶಂಕು, ಮೇನಕೆಯರ ಪ್ರಸಂಗಗಳನ್ನು ಇಟ್ಟುಕೊಂಡಿದ್ದಾರೆ. ಹರಿಶ್ಚಂದ್ರನಿಗೆ ಪೀಡಿಸಿದ ಪ್ರಸಂಗ ಬಿಟ್ಟಿದ್ದಾರೆ. ತ್ರಿಶಂಕು ವಶಿಷ್ಠರ ಶಾಪದಿಂದ ಹೊಲೆಯನಾದ ಅಂಶವನ್ನೂ, ಮೇನಕೆಯಲ್ಲಿ ವಿಶ್ವಾಮಿತ್ರರಿಗೆ ಶಕುಂತಲೆ ಎಂಬ ಮಗಳು ಹುಟ್ಟಿದ ಅಂಶವನ್ನೂ ಬಿಟ್ಟಿದ್ದಾರೆ.

ಶಂಬಾ ಅವರ ದೃಷ್ಟಿ ಲೋಹಿಯಾ, ಪೋಲಂಕಿ, ಗೋಕಾಕ ಯಾರೊಬ್ಬರ ದೃಷ್ಟಿಯೊಂದಿಗೂ ಪೂರ್ಣವಾಗಿ ಬೆರೆಯುವುದಿಲ್ಲ. ನಾರಾಯಣಾಚಾರ್ಯರ ದೃಷ್ಟಿಗೆ ಮಾತ್ರ ಸಂಪೂರ್ಣ ವಿರುದ್ಧವಾಗಿದೆ. ಶಂಬಾ, ನಾರಾಯಣಾಚಾರ್ಯ ಇಬ್ಬರೂ ವೇದಸೂಕ್ತಗಳನ್ನು ವ್ಯಾಖ್ಯಾನಿಸಲು ಪ್ರಯತ್ನಿಸುತ್ತಾರೆ. ಲೋಹಿಯಾ ಮತ್ತು ಪೋಲಂಕಿ ವೇದ ಸೂಕ್ತಗಳಿಗೆ ಕೈ ಹಾಕುವುದಿಲ್ಲ. ಗೋಕಾಕರು ವೇದ ಸೂಕ್ತಗಳಿಂದ ಸ್ಫೂರ್ತಿ ಪಡೆದಿರಬಹುದಾದರೂ ಕವಿಯಾಗಿ ಅವರು ಮಾಡಿದ ಚಿತ್ರಣ ಅವರದೇ ಆಗಿದೆ.

---

ನಾವು ಭಾರತೀಯರು ಇಂದು ಅನುಸರಿಸುತ್ತಿರುವ ದೈವತೆಗಳೆಲ್ಲವೂ ಲೈಂಗಿಕ ಮೂಲವಾದವುಗಳು. ಸರ್ಪಾದಿ ಸಂಕೇತಗಳಿಗೆ ಸಂಬಂಧವುಳ್ಳವು. ಶಿವ, ವಿಷ್ಣು, ದೇವಿ, ಮಾತೃದೇವತೆ ಇತ್ಯಾದಿಗಳೆಲ್ಲ ಜಲ ಸಂಪ್ರದಾಯದವೇ ಎಂಬುದನ್ನು ಶಂ. ಬಾ. ಅವರು ವೇದಕಾಲದವರೆಗೂ ಹಿನ್ನಡೆದು ಹುಡುಕಿ ತೀರ್ಮಾನಿಸಿದ್ದಾರೆ.

—ಪಾ. ವೆಂ. ಆಚಾರ್ಯ

("ಡಾ॥ ಶಂ. ಬಾ; ಪಾ. ವೆಂ. ಕಂಡಂತೆ" ಪುಟ-೨೦)

---

# ಮಾನವ ಜೀವನದಲ್ಲಿನ ತೊಡಕು

—ಡಾ॥ ಶಂ. ಬಾ. ಜೋಶಿ

ಜೀವಿತವು ಕರ್ಮಕ್ಕೆ, ಕಾಯಕಕ್ಕೆ ಪ್ರೇರೇಪಿಸುತ್ತದೆ. ಜೀವನವು ಕರ್ತವ್ಯದ ಪಾತಾಳಿಯ ಮೇಲೆ ಇದೆ. ಜೀವಿತವು ವ್ಯಕ್ತಿಕವಿರುವಂತೆ, ಕರ್ತವ್ಯವು ಸಾಮಾಜಿಕ ಸ್ವರೂಪದ್ದು. 'ನ ಮೇ ಅಸ್ತಿ ಕರ್ತವ್ಯಂ—ತ್ರಿಷು ಲೋಕೇಷು ಕಿಂಚನ' ಎಂಬುದು ಅಸಮಾಜಿಕ ಪ್ರವೃತ್ತಿಯ ಮೋಕ್ಷಾಕಾಂಕ್ಷಿಗಳ ಉಪಾಸ್ಯ ದೈವತವಾದ 'ಭಗ-ವಂತ'ನ ಉಕ್ತಿ !

'ಸಂಶಯಾತ್ಮಾ ವಿನಶ್ಯತಿ' ಎಂಬ ಇನ್ನೊಂದು ದುಷ್ಪ್ರವೃತ್ತಿ ಪ್ರೇರಕ ಭಗವದುಕ್ತಿ ! ಜಿಜ್ಞಾಸಾರೂಪ ಸಂದೇಹವು ಮಾನವನನ್ನು ನಾನಾ ಶಾಸ್ತ್ರ, ಸಾಹಿತ್ಯ, ಕಲೆಯ ದಾರಿಯಲ್ಲಿ ಕೊಂಡೊಯ್ಯಬಲ್ಲುದು.

'ನಂಬಿ ಕೆಟ್ಟವರಿಲ್ಲ', 'ಯೋ ಯಚ್ಛ್ರದ್ಧಃ, ಸ ಏವ ಸಃ' ಎಂಬುದು ಅಂಶತಃ ಸತ್ಯ. ಸಂದೇಹಿಸಿ ವಿಮರ್ಶಿಸಿದಲ್ಲದೆ ನಿಶ್ಚಿತ ಜ್ಞಾನವು ಅಶಕ್ಯವಿದೆ. ಈ ಬಗೆಯ 'ಜಾತವೇದ ಅಗ್ನಿ'ಯ 'ಸಂದೇಹ' ಎಂಬುದೇ ಜ್ಞಾನದ ಹಸಿವು. ನಮಗಿಂದು ಬೇಕಾದುದೇನು ? ಸಂತೋಷವಂತೆ, ಸಂತೋಷ ! ಮೊದಲು ಸಂತೋಷ ? ಛಿಃ ! ಸಂತೋಷ, ಸಮಾಧಾನ, ಆನಂದ ಇವು ಯಾರ ಸ್ವತ್ತು ? ಸಂತೋಷ ಪಡೆವ ಅಧಿಕಾರ ಯಾರದು ? ಸಂತೋಷವು ಯಾರ ಹಕ್ಕು ! ? ಹಸಿದವನಿಗಲ್ಲವೆ ಉಂಬ ಊಟದ ಸೊಗಸು ? ನೀರಳ್ಳಿದವನಿಗಲ್ಲವೆ ಕುಡಿವ ನೀರಿನ ಸಂತಸ? ನಿಜವಾಗಿ ಹಸಿವಾದವನಿಗೇ ಊಟದ ಅಧಿಕಾರ ; ಉಣ್ಣುವ ಹಕ್ಕು. ಅದರಂತೆ ನಿಜವಾದ ಸಂತಸದ ಸೌಖ್ಯವು ಅಸಂತುಷ್ಟರಿಗಲ್ಲದೆ ಬೇರೆಯವರಿಗಿಲ್ಲ. ಮೊದಲು ಹಸಿವು ಬಳಿಕ ಊಟ ; ಹಸಿಯದೆ ಉಂಡುದು ಅಜೀರ್ಣ. ಅನಾರೋಗ್ಯಕ್ಕೆ ಊಟ[1] ಆನಂದವು ದೊರೆಯಲು ತುಂಬಾ ಅಸಂತುಷ್ಟಿಯ ಕಳವಳದ ಸಂತಾಪವನ್ನು ಅನುಭವಿಸಲು ಮೊದಲು ಸಿದ್ಧರಾಗಬೇಕು. ಬಿಸಿಲನ್ನೇ ಅರಿಯದವನಿಗೆ ನೆಳಲ ಸೌಖ್ಯವೇನು?

ಆದುದರಿಂದಲೇ - ಮೊದಲು ತುಂಬ ಅಸಂತುಷ್ಟರಾಗಿರಿ ಅತೃಪ್ತಿಯನ್ನು ಜಾಗೃತಗೊಳಿಸಿರಿ. ಎಷ್ಟು ಅಸಂತುಷ್ಟಿಯೋ ಅಷ್ಟು ಹೆಚ್ಚಿನ ಸಂತಸ ಪಡೆವ ಹಕ್ಕು ಅವರದು.

---

1. ದೇಶಾಟನ ಮಾತುಗಳನ್ನು ಹೋಲಿಸಿ ನೋಡಿ.

ಬೇಡದೆ ಪಡೆಯಲಾರೆ ; ಬೇಡಿದುದಕ್ಕಿಂತ ಹೆಚ್ಚಂತೂ ಸಿಗದು. ಬೇಡಿದಷ್ಟು ದೊರೆಯುವುದು ದುರ್ಲಭ. ಬೇಡಿದಕ್ಕಿಂತ ಕಡಿಮೆ ಕೊಡುವುದೇ ಲೋಕ ರೂಢಿ. ಆದುದರಿಂದ, ಮೊದಲೇ ಕಡಿಮೆ ಬೇಡಿದರೆ ದೊರೆಯುವುದು ಅದಕ್ಕೂ ಕಡಿಮೆ. ಎಚ್ಚರ !

'ಬೇಕು' ಎಂಬುವನೇ ಬದುಕುವನು. 'ಸಾಕು' ಎನ್ನಬೇಡಿ ಸಾ-ವು ಮತ್ತು ಸಾ-ಕು ಬೇರೆಯಲ್ಲ. ಒಂದೇ ಆದುದರಿಂದ 'ಸಾಕು' ಎಂಬುದು ಮರಣ.

'ಬೇಕು' ಎಂಬುದೇ ಜೀವನ. ಅತೃಪ್ತಿ, ಅಸಂತೋಷಗಳು ಬೆಳವಿಯ ಕುರುಹುಗಳು; ಅಸಂತೋಷದಲ್ಲಿಯೇ ಆರಂಭವಿದೆ. ತಲೆಯೆತ್ತ ಹಚ್ಚುವುದು ಅತೃಪ್ತಿ. ಅತೃಪ್ತಿ, ಅಸಂತೋಷಗಳ ಒತ್ತಾಯವಿಲ್ಲದೆ ತಲೆದೋರಿದ ಕಾರ್ಯಗಳಾವುವು, ಈ ಲೋಕದಲ್ಲಿ ? ತೃಪ್ತಿಯ ಮೊದಲು ಅತೃಪ್ತಿ. ಅತೃಪ್ತಿಯು ತಂದಿ ತೃಪ್ತಿ. ಅತೃಪ್ತಿಯು ಮೊಳೆ (ಚಿಗುರು); ಸಫಲತೆಯಿದೆ. ಫಲವೆಂದರೆ ಗೊನೆ ; ಗೊನೆಯೇ ಕೊನೆ ಮತ್ತೆ ! ಗೊತ್ತಿರಲಿ! ತೃಪ್ತಿ, ಸಂತೋಷ, ಆನಂದ ಎಂಬಿವು ಮಾನವನ ಅಂತ್ಯದ ಸಿದ್ಧಿ (ಫಲ)ಗಳು ; ಕೊನೆಯ ಗೊನೆಗಳು.

ಅತೃಪ್ತಿಯಿಂದ ಆರಂಭವಾಗಿ ತೃಪ್ತಿಯಲ್ಲಿ ಬಾಳು ಕೊನೆಗೊಳ್ಳಬೇಕು. 'ಬೇಕು' ಎಂಬುದರಿಂದ ಬೆಳಿಗೆಯಾಗುವುದು. ಸಾಕು-ಎಂದರೆ ಸಮಾಪ್ತಿ, ಸಮಾಧಿ. 'ಬೇಕು' ಎಂಬುದೇ ಗೊತ್ತಿಲ್ಲದಿದ್ದರೆ 'ಸಾಕು' ಎಂಬುದಕ್ಕೇನು ಅರ್ಥ ? ಆದುದರಿಂದಲೇ ತರುಣರು ಅತೃಪ್ತರಾಗಿರಬೇಕು. ಅಥವಾ ಕೃತಿಗೆ ಸಿದ್ಧರಿರುವ ಅತೃಪ್ತರೇ ತರುಣರು. ಅತೃಪ್ತಿ, ಅಸಮಾಧಾನ, ಅಸಂತೋಷವಿದ್ದವರೇ ಯುವಕರು. 'ಬೇಕು' ಇನ್ನೂ ಬೇಕು. ಇನ್ನಿಷ್ಟು ಬೇಕು ಎಂಬ ಹಂಬಲಿಗರೇ ಹರೆಯದವರು. ಹರೆಯದವರು ಹರಿದಾಡುವವರು ; ಪ್ರಸರಣಗೊಳ್ಳುವರು. ಮುರುಟಿಕೊಳ್ಳುವುದು, ಸಾಕೆಂಬುದು, ಅಲ್ಪಸಂತುಷ್ಟರಾಗುವುದು ಇವೆಲ್ಲ ಮುಪ್ಪಿನ ಲಕ್ಷಣಗಳು. ಅನಾರೋಗ್ಯದ ಸೂಚನೆಗಳು. ಕೊನೆಗಾಲದ ಕುರುಹುಗಳು. ಬಿಡುಗಡೆಯುಅಸಮಾಧಾನ. ಹಸಿವು, ಹಂಬಲ, ತಳಮಳ, ಕಳವಳ-ವಳವಳ, ಇದುವೆ ಚಳವಳ ಅಥವಾ ಚಳವಳಿ–(ತನ್ನ ಏಳ್ಗೆಗಾಗಿ ನಡೆಸಿದ) ಚಲನವಲನ ಹೋರಾಟ. ಹೋರಾಟದ ಫಲಿತವೇ ಶಾಂತಿ. ಶಾಂತಿ ಒಂದು ಸ್ಥಿತಿ. ಹೋರಾಟ ಕೃತಿ. ಶಾಂತಿಯು ಸ್ಥಿತಿ, ಹೋರಾಟವು ಗತಿ. ಹೋರಾಟದಿಂದಲ್ಲದೆ, ಹೋರಾಟವಿಲ್ಲದೆ ದೊರೆತ ಶಾಂತಿ ಬರಿದು ; ಶೂನ್ಯ[2] ಅರ್ಥ ವಿಹೀನ.

2. ಇದನ್ನು ಋಗ್ವೇದದ ಪರಿಭಾಷೆಯಲ್ಲಿ ಹೇಳುವುದಾದರೆ: ಆಭುಃ-ಪೊಳ್ಳು (void) ಶೂನ್ಯ.

ಗಚ್ಛತಿ ಇತಿ ಜಗತ್. ಪ್ರಪಂಚವು ಒಂದು ಪ್ರವಾಹ. ಹರಿಯುತ್ತಲಿದ್ದರೇ ಹರಿವ ನೀರು (ಜೀವನ) ತಿಳಿಯಾಗಿರುವುದು. ಜೀವಂತವಾಗಿರುವುದು. ಹರಿಗಡಿದರೆ ಎಲ್ಲವೂ ಕೊಳೆ, ಕೊಳಚೆ, ಅಶುಚಿ. ಪ್ರವಹಿಸುತ್ತಿದ್ದರೇ ಪವಿತ್ರ. ಆದುದರಿಂದ ಗತಿಯೇ ಲೋಕದ ಸ್ಥಿತಿ, ಎಂದರೆ ಸ್ವಭಾವ. ಸ್ಥಿರತೆ ಎಂಬುದು ಭ್ರಮೆ. ಸ್ಥಿರತೆ ಕೊಳೆಗೆ ಕಾರಣ. ಆದುದರಿಂದ ಪ್ರಗತಿಗಾಗಿ ಚಲನವಲನ ಚಳವಳಿ, ಹರಿದಾಟ, ಹೋರಾಟಗಳೇ ಮಾನವನ ಜೀವನ ಧರ್ಮ ಎಂಬಲ್ಲಿ ಏನೂ ಸಂದೇಹವಿಲ್ಲ. ಜೀವಿತದ ಧರ್ಮವು ಕರ್ಮಕ್ಕೆ-ಕಾಯಕಕ್ಕೆ ಹೆಚ್ಚುತ್ತದೆ. ಜೀವನದ ಧರ್ಮವು ವೈಶ್ವಾನರಾಗ್ನಿ=ವಿಶ್ವಮಾನವನ ಸೇವೆಯ ಕರ್ತವ್ಯಕ್ಕೆ ಪ್ರೇರೇಪಿಸುತ್ತದೆ.

**ಹೋರಾಟದ ಸ್ವರೂಪ ಎಲ್ಲಿ ? ಹೇಗೆ ?**

ಹೋರಾಟ ! ಎಷ್ಟು ಜೀವಂತ ಮಾತು ? ಜೀವಂತ ಜನರೇ ಹೋರಾಡಬಲ್ಲರು, ಹೋರಾಡುವರು. ಈ ಲೋಕದಲ್ಲಿ ನಿರ್ಜೀವಿಗಳಾಗಿ, ಜೀವಂತ ಹೆಣಗಳಾಗಿ, ಕೂಳಿಗೆ ಭಾರವಾಗಿ, ನಾಡಿನ ಬರಗಾಲವನ್ನು ಹೆಚ್ಚಿಸುವ—ದೇಶದ ದುಷ್ಕಾಲಕ್ಕೆ ಕಾರಣರಾದ (ಅಲ್ಲಲ್ಲ) ಕಾರಣವಾದ ನರಗುರಿಗಳನ್ನು ಬಲಿಯನ್ನು ತಕ್ಕೊಳ್ಳುವುದಕ್ಕಾಗಿ, ಭೂಮಿಯ ಭಾರವನ್ನು ಇಳಿಸುವುದಕ್ಕಾಗಿ ಮಾರೀ ದೇವಿಯು ಹೂಡುವ ಹೂಟವೇ ಹೋರಾಟ. ಹೋರಾಟವೇ ವಿಶ್ವ ನಿಯಮ. ಶಾಶ್ವತ ಸತ್ಯ. ಹೋರಾಟ, ಹೋರಾಟ, ಹೋರಾಟ, ಇದೇ ಸನಾತನ ಧರ್ಮ.

ಶಸ್ತ್ರಾಸ್ತ್ರಗಳಿಂದ, ತೋಪು ತುಬಾಕಿಗಳಿಂದ, ವಿಮಾನ ಟ್ಯಾಂಕುಗಳಿಂದ ನಡೆದುದಷ್ಟೇ ಹೋರಾಟ, ಎಂದು ಭಾವಿಸುವವರು ಎಗ್ಗರು, ಬರೀ ಹೊರಗಣ್ಣಿನವರು. ಅದು ಹೋರಾಟದ ತೀರ ವಿಕೃತ ರೂಪ, ಆಸುರೀ ಸ್ವರೂಪ. ಸ್ಥೂಲ, ಸೂಕ್ಷ್ಮವಾದ ಹಲವು ರೂಪಗಳಲ್ಲಿ ಹೋರಾಟವು ವಿಶ್ವದಲ್ಲೆಲ್ಲ ಎಡೆಬಿಡದೆ ನಡೆದಿದೆ. ಈ ಹೋರಟೆಯು ಪ್ರಜ್ಞಾಪಾತಳಿಯ ಮೇಲಣ ಪ್ರೇರಣೆಯದು ಇರಬಲ್ಲುದು ಅಥವಾ ನಚಿಕೇತಾಗ್ನಿ 'ಅಂಗಾನಾಂ ರಸಃ' ಪ್ರಚೋದಿತ ಪ್ರಾಣಚೇತನದ ಪಾತಳಿಯ ಪ್ರೇರಣೆಯದು ಇರಬಲ್ಲುದು.

ಹೋರಾಟವೇ ನಮ್ಮ ಜೀವನ ಸೂತ್ರ. ನಮ್ಮ ರಕ್ತ ಸಂಚಲನವೂ ಒಂದು ಹೋರಾಟವೇ. ನೆತ್ತರಿನ ಶುದ್ಧಾಶುದ್ಧ ಅಣುಗಳ ತಿಕ್ಕಾಟ, ತಾಕಲಾಟ, ಹೋರಾಟವು—ಅವ್ಯಾಹತವಾಗಿ ಸಾಗಿದೆ. ನೆತ್ತರವು ತನ್ನ ಶುದ್ಧ ಸ್ಥಿತಿಯನ್ನು ಕಾಯ್ದುಕೊಳ್ಳಲು ಎಡೆಬಿಡದೆ ಹವಣಿಸುತ್ತದೆ. ನೆತ್ತರದೊಳಗಿನ ಈ ಶಕ್ತಿಯು ಕುಂದಿದೊಡನೆ ಮಾನವನೂ ನರಗುಂದಿದವನಾಗುವನು, ನಿರ್ಜೀವನಾಗುವನು.

ಅದೇಕೆ, ಹೋರಾಟವೇ ವಿಶ್ವದ ಅಸ್ತಿತ್ವಕ್ಕೂ ಕಾರಣ. ಅಣುರೇಣು ಗಳಲ್ಲಿಯೂ ಇಷ್ಟವಾದ ಎಳೆದಾಟ, ತಿಕ್ಕಾಟವು ನಡೆದುದನ್ನು ಭೌತಶಾಸ್ತ್ರಜ್ಞರು ಕಂಡುಹಿಡಿದಿದ್ದಾರೆ. ಸಿಡಿಲು ಮಿಂಚಿನ ತಾಯಿ ವಿದ್ಯುತ್ತು. ಆ ವಿದ್ಯುತ್ತೇ ವಿಶ್ವದ ಕಣಕಣಗಳಲ್ಲಿ ವ್ಯಾಪಿಸಿ ಹೊರಹೊಮ್ಮುತ್ತಿದೆ. ವಿದ್ಯುತ್ತು ಒಂದು ಶಕ್ತಿ. ಅನಂತ ಶಕ್ತಿಯೇ ಹೋರಾಟದ ಅಧಿದೇವತೆ.

ಹೋರಟೆ ! ಹೋರಾಟ ! ಇದು ಒಂದೇ ಪ್ರತಿಯೊಬ್ಬರಿಗೂ ಇರುವ ಏಳ್ಗೆಯ ದಾರಿ ; ಉದ್ಧಾರದ ಮಾರ್ಗ. ಹೋರಾಟಕ್ಕೆ ಮೊದಲು ಅಸಂತೋಷವು ಬೇಕು ಅಸಂತುಷ್ಟಿಯಿಲ್ಲದವರು ಹೋರಾಟಕ್ಕೆ ಸೊಂಟ ಕಟ್ಟರು. ಹೋರಾಟದ ಉಗಮವು ಹಸಿವೆಯಲ್ಲಿದೆ. ಮನದ ಹಸಿವು ಜ್ಞಾನಸಾಧನೆಗೆ ಕಾರಣವಾಗುತ್ತದೆ. ಒಡಲ ತಿಂಡಿ ಹೋರಗೆ ಹಚ್ಚುತ್ತದೆ. ತೋಳ ತಿನಿಸು ತಿಕ್ಕಾಟವನ್ನು ಹುಟ್ಟಿಸುತ್ತದೆ. ಹಸಿವೇ ಜೀವನದ ಪ್ರಚೋದಕ ಶಕ್ತಿ. ಹಸಿಯದೆ ಭೂಮಿ ಬೆಳೆಯದು. ಹಸಿಯದೆ ಮಾನ ವನು ಬೆಳೆಯಲಾರನು. ಹಸಿವು, ತಿಂಡಿ, 'ತೀನಿ' ಆಗುವಾಗ ಇದು ಹೀನ ಕಾಮು ಕತೆಯಾಗುತ್ತದೆ. ಇದುವೆ ಪ್ರವರ್ಧಮಾನಕ್ಕೆ ಕಾರಣ. ಹಸಿವು ಎಂದರೆ ಇದು, 'ಇಚ್ಛಾಶಕ್ತಿ'ಯ ಮೂಲ. ಹಸಿವು ಎಂದರೆ ಹಂಬಲ ; ಹೋರಾಟದ ಆದಿ. ಹಸಿ ವಾಗದೆ ಇರುವುದು ಅನಾರೋಗ್ಯದ ಲಕ್ಷಣ. ಸಾವು ಸಮೀಪಿಸಿದ ಪೂರ್ವ ಸೂಚನೆ. ಆದುದರಿಂದ ಹಸಿವು ಬೇಡವೆಂಬುದೂ ಆತ್ಮಹತ್ಯೆ ಮಾಡಿಕೊಂಬುದೂ ಒಂದೇ. ಹಸಿವಿಗಾಗಿ ಹಸಿವು. ಆರೋಗ್ಯಕ್ಕಾಗಿ ಹಸಿವು. ಜೀವನಾನಂದ ದಾರಿ. 'ಶರೀರಂ ಆದ್ಯಂ ಖಲು ಧರ್ಮ ಸಾಧನಂ' ನಿಜ. ಆದರೆ, ಶರೀರ ಧರ್ಮದ ರಕ್ಷಣೆ ಭೋಗವ ಉದ್ದೇಶದುದಲ್ಲ. 'ಇದು' ಆ ವ್ಯಕ್ತಿಯ ಅಧಃಪಾತಕ್ಕೆ ಕಾರಣ. ಸಾಮಾಜಿಕ ಧರ್ಮ ಪಾಲನೆಯ ಸಾಧನ ಈ ಶರೀರ. ಯಜ್ಞ ಎಂದರೆ ಬೇಳುವೆ ಅಥವಾ ಬೇಳ್ಕೆ ; ಬೇಳ್ಕೆಯ ಬೇಡಿಕೆ. ಯಜ್ಞಕ್ಕೆ ಕ್ರತು ಎಂದೂ ಹೆಸರಿದೆ. ಕ್ರತು ಎಂದರೆ ಸಂಕಲ್ಪವೂ ಹೌದು. ಕ್ರತು ಶಕ್ತಿಯೆಂದರೆ ಸಂಕಲ್ಪ ಶಕ್ತಿ (will power). ಆದುದರಿಂದ ಯಜ್ಞ ಎಂದರೆ ಕ್ರತು. ಕ್ರತು ಎಂದರೆ ಬೇಳುವೆ. ಬೇಳುವೆಯೆಂದರೆ ಸಂಕಲ್ಪ ಶಕ್ತಿ, ಇಚ್ಛಾಶಕ್ತಿ. ಸಂಕಲ್ಪವೇ ಸಂಸಾರದ ಮೂಲಾಧಾರ. ಬೇಕು ಎಂಬುದರಿಂದಲೇ ಬದುಕು. ಬೇಕು ಎಂಬುದೇ ಹಸಿವು.

("ಸಾಂಸ್ಕೃತಿಕ ಮೂಲದಲ್ಲಿನ ತಾತ್ವಿಕ ಚಿಂತನಗಳು" ಕೃತಿಯಿಂದ,
ಸಂಪಾದನೆ : ಮಲ್ಲೇಪುರಂ ಜಿ. ವೆಂಕಟೇಶ್–೧೯೭೮)

# ಶ್ವೇತ ಕೇತುವಿನ ಆಖ್ಯಾನ

—ಡಾ॥ ಕೆ. ಕೇಶವ ಶರ್ಮ

(ಶ್ವೇತಕೇತುವಿನ ಪ್ರಸಂಗ ಮಹಾಭಾರತದಲ್ಲಿ ಬರುತ್ತದೆ. ಕುಟುಂಬದ ಉಗಮಕ್ಕೆ ಈತನೇ ಕಾರಣನೆಂದು ಹೇಳಲಾಗುತ್ತದೆ).

ಕಾಮ ಚುಂಬಿತ ರಾತ್ರಿಯಲ್ಲಿ
ಮೆಲ್ಲನೆ ಹೂಗಳು ಅರಳುತ್ತವೆ
ನಿಧಾನವಾಗಿ ತುಟಿ ದಳಗಳು ಅಲುಗುತ್ತವೆ
ಮೆಲ್ಲನೆ ಬೀಸಿ ಬರುವ ಗಾಳಿಗೆ
ಅದುರುತ್ತವೆ ಅದಿರು ಅದಿರಾಗಿ

ಕಾಮ ಚುಂಬಿತ ರಾತ್ರಿಯಲ್ಲಿ
ಪಾತಾಳದ ಕೆಂಡ ಕಿಡಿಯುಗುಳುತ್ತದೆ
ಗಡಿಯಾಚೆಗೆ ಕೈಯ ಚಾಚುತ್ತದೆ
ಯಾವ ಬಂದರಿಗೆ ಕಾಲಹಿಡಿಯುತ್ತದೆ.

ಕಾಲ ಕಾಲವ ಬೇಡುತ್ತದೆ
ತೆಳು ಪರದೆ ಸರಿಯುತ್ತದೆ
ಕಿಟಕಿಯಲ್ಲಿದ್ದ ಮಿಣುಕು ದೀಪ ಹಾಡು ಹೇಳುತ್ತದೆ:
ತಂಬೂರಿಯ ಶ್ರುತಿಯು ಮೆಲ್ಲನೆ ಹರಡುತ್ತದೆ
ಅಲ್ಲಿಂದ ಇಲ್ಲಿಗೆ
ಕೊಟ್ಟದ್ದು ಎಷ್ಟೋ-ಪಡೆದದ್ದು ಅಪಾರ

ಕಣ್ಣ ರೆಪ್ಪೆಯಲ್ಲಿ ಮುಡುಕಟ್ಟಿ ನಿಂತಿದೆ ಬಯಕೆ
ಕಾಮ ಚುಂಬಿತ ರಾತ್ರಿಯಲ್ಲಿ
ಉಗುರುಗಳಿಗೂ ಕನಸಿನ ಚಿತ್ತಾರದ ಭ್ರಮೆ
ಹೀಗಿರಲು : ರೂಪ ಮಾಯವಾಗಿ
ವಿಜೃಂಭಿಸಿದೆ ಕಾಮ ಬಾಣ!

ಎದೆಯಲ್ಲಿ ಮೂಡಿತು ಹಲ್ಲು
ಕೆಂಪೇರಿತು ಗಲ್ಲ
ನಾಭಿಯಾಳದಲ್ಲಿ ಮಡುಗಟ್ಟಿತು
ಕಾಲಗಲಿಸಿ, ದೇಹವ ಮುದ್ದೆ ಮಾಡಿತು
ಉಗುರು ಉಗುರುಗಳಿಗೂ ಹುಟ್ಟಿತು ಜೀವ
ಖಂಡ–ಖಂಡಕ್ಕೂ ತುಂಬಿತು ಜೀವ
ಒಂದು ಮತ್ತೊಂದರ ಜೊತೆಯಲ್ಲಿ ಬೆರೆತಿವೆ ದೇಹ
ಒಂದು ಮತ್ತೊಂದರ ಮರೆತ ಕ್ಷಣ
ಸುತ್ತಲ ಜಗತ್ತು ಸರಿಯಿತು ದೂರ
ಗುಹೆಯ ಹೊಕ್ಕನು ರಾಜ : ಒಪ್ಪಿಸಿದಳು ಋಷಿ ಪತ್ನಿ

ಕಾಮನಾಟದ ಬೇಟಕೆ ಇಳೆಯು ತೊಯಿತು
ಬೆವರು ಕುಣಿಯಿತು–ಮುಂಗುರುಳು ಕುಣಿದಾಡಿತು.
ಎಲ್ಲಿಂದ ಬಂದನೋ ಮಾರ ಮದನ ದಂಡವ ತೆಗೆದು
ಕನಸೆಲ್ಲ ಹನಿಗೂಡಿ ಬಂದಂತೆ ಬೆಳೆದ ಜೀವ ಮಲುಕಾಡಿತು
—ಕಾಡಿತು ಮತ್ತೆ ನೆನಪು.

ಅವಳು ಹೇಳಿದಳು :
ಗನಿಯೊಳಗಿನ ಅದಿರ ತೆಗೆದು ತೋಡಿಕೊಂಡೆ
ನಿನ್ನ ಅಧರ ಪಾನದ ಅಮಲು
ಈಚಿನ ಅರಸೊತ್ತಿಗೆಯು ಸುಪ್ಪತ್ತಿಗೆ
ಮುಟ್ಟಿ ದಿನವಾಯ್ತು ಐದು
ಕಾಲ ಉಂಗುಷ್ಟದಿಂದ ತಲೆಯವರೆಗಿನ
ಕ್ರಿಯೆ ಮತ್ತೆ ತುಂಬುವುದೇ ಕನಸ ?

ರಾಜ ಹೇಳಿದ :
ಋಷಿಪಕ್ಷಿಯೂ ಚಂಚಲೆ
ಹಯದಂತೆ ಮುನ್ನುಗ್ಗಿದೆ.
ತಣಿದಿದೆ ಕಾವು : ನಕ್ಷತ್ರಗಳು ಅರಮನೆಯ
ಹೊರಗೆ ಕಣ್ಣು ಮಿಟುಕಿಸಿವೆ
ಕಂಚುಕ ತೊಡು : ಹೊರಡು ಮತ್ತೆ

ಅವಳ ನಿನ್ನೆಯ ಚರಿತ್ರೆ
ಮತ್ತೆ ಹಾಡು ಹಗಲಿನಂತೆ ಇಳಿಯಿತು
ಅದೇ, ಭುವಿಗೆ,
ಕಾಡಿನ ಹಾದಿಗೆ,
ಮತ್ತೆ ಆಶ್ರಮಕ್ಕೆ,

ಕಾಮ ಚುಂಬಿತ ರಾತ್ರಿಯಲ್ಲಿ
ಅರಳಿದ ಮೊಗ್ಗುಗಳು ಮುಂದುಡಿದವು ಅತ್ತವು,
ದಿವ್ಯ ಕ್ಷಣದ ತುಟಿದಳದಲ್ಲಿ ಅದೇ ದಂತದ ಮುದ್ರೆ
ಬೀಸಿ ಬರುವ ಗಾಳಿಯೂ ದೂರ ಸರಿಯಿತು.

ಕಂಚುಕ–ವಲ್ಕಲದ ಬಾಲೆ
ದಾಹ ಹಿಂಗಿಸಿಕೊಂಡು ನಡೆದಳು
ಕಾಮ ಚುಂಬಿತ ರಾತ್ರಿಯಲ್ಲಿ
ಅರಳಿದ ಮೊಗ್ಗುಗಳು ಮುಂದುಡಿದವು.
ದೀಪಮಾರಿತು-ಮೌನ ತುಂಬಿತು
ಬೆಳಗು ಇಳಿಯಿತು ಭುವಿಗೆ

(ಶ್ವೇತಕೇತು ಅಪ್ಪನ ಕಾಲು ಒತ್ತುತ್ತಾ ಕೂತಿದ್ದಾನೆ. ಕ್ಷಣಗಳೂ ಮೌನವಾಗಿವೆ ಜನ ತುಟಿಯಲ್ಲಿ. ಆಶ್ರಮದ ಜಿಂಕೆ ಸುತ್ತಾಡಿತು ಅಲ್ಲಿ-ಇಲ್ಲಿ. ಮೌನ ಒಡೆಯಿತು ಮುನಿಯ ಉಬ್ಬಸದಿಂದ-ಸರಿಯಿತು ಕಾಲ ಯಾತನೆಯ ಕೊಂಡು)

"ಅಪ್ಪ-ಅಮ್ಮ ಹೊರಟುದೇಕೆ?"
ಗೊರಲಿನ ದನಿಯಲ್ಲಿ ಅಸ್ಪಷ್ಟವಾಗಿ ತೊದಲಿದ
ಮುನಿ ಅಸಂತೃಪ್ತ ಛಾಯೆಯಲ್ಲಿ :
"ಋತುಕಾಲದ ಋತುಮ ಕಳೆಯಬಾರದು
ಮಗಾ, ಸಾವು ಬಂದಿದೆ ನನ್ನ ಹೆಗಲುಗಳಿಗೆ
ಕತ್ತಲೆಯು ತುಂಬಿದೆ ರೆಪ್ಪೆಗಳಿಗೆ
ಗಡಿಯ ದಾಟಲಾಗದೆ ಜಡವಾಗಿದೆ
ನನ್ನ ತೊಡೆ-ನನ್ನ ಕಂದುರೆ.

ಗಲ್ಲದಲ್ಲಿ ಬಂದು ಕೂತಿದೆ ನೆರೆ.
ಹೆಣ್ಣಿನ ಋತುಕಾಲ ಸೋತರೆ
ಕಾಯುವುದು ನಮ್ಮ ನರಕ"
ಕಣ್ಣಿನಂಚಿನಲ್ಲಿ ಜಿನುಗಿತು ನೀರು
ನೆನಪು ಮತ್ತೆ ಬಂದಿತು ನೆರೆಯ ಹಾಗೆ :

ಕೊರಡು ಕೈ-ಕಾಲುಗಳ ಒತ್ತಿದಳು ಬಾಲೆ
ತಣ್ಣನೆಯ ದೇಹದೆಡೆ ಇಪ್ಪತ್ತನಾಲ್ಕು ಗೂಡು.
ಕಡ್ಡಿ ತೊಡೆಗೆ ಬಿಸಿಯೇರಲಿಲ್ಲ.
ಬಿಸಿಯೇರಿದ ಬೆದೆಗೆ ಒಡ್ಡುವ ಹೆಣ್ಣೆ
ಶೀತಲ ಕಣ್ಣುಗಳಿಂದ, ನಿಟ್ಟುಸಿರಿದಳು—ನಿರಾಸೆಯಿಂದ.

ಅದೇ ಕೊರಡು ಕೈಕಾಲುಗಳ ಒತ್ತಿದಳು ಯೌವನೆ
ಕಗ್ಗತ್ತಲ ಗವಿಯಂತೆ ಕಣ್ಣೆ : ಯುಮುನ ಆಳುಗಳು
ನೆಲೆಯಾರಿದಂತೆ ಗಲ್ಲ ;
ಭಸ್ಮ ಲೇಪಿತ ಹಣೆಯಲ್ಲಿ ಸಾವಿರದ ಗೆರೆಗಳು
ಸಾವನ್ನು ಕೈಮಾಡಿ ಕರೆದಂತೆ.

ತುಂಬಿ ಕೈಮಾಡಿ ಕರೆವ ಯೌವನದ ಬೆಂಕಿ
ಬೂದಿ ಮುಚ್ಚಿದ ಕೆಂಡದಂತೆ
ನಿಟ್ಟುಸಿರು ಬಂತು ತೊಡೆಯಾಳದಿಂದಲೇ ಉಸಿರಿಗೆ.
ತಿಕ್ಕಿದಳು ಕೈಯನ್ನು : ತನ್ನೆದೆಯ ನೋಡುತ್ತಾ
ಚಿನ್ನದಂತಹ ಹುಡುಗ ಶ್ವೇತಕೇತು
ಜಿಂಕೆಯನ್ನು ಮುದ್ದಾಡಿದ.

ಸುಖವಿಲ್ಲ ತನುವಿಗೆ-ಮನಕ್ಕೆ
ಬೆಂಕಿ ಹೊತ್ತಿದೆ ತೊಡೆಗೆ
ಕಾಮನಾಟಕ್ಕೆ ಕರೆದಿದೆ ತನುವು-ಮನಸು
ತೊಡೆಯಾಳದಲ್ಲಿ ಚಿತ್ತ ಭ್ರಮಿಸಿದೆ :
ಓಡಿ ಬರುವ ಕುದುರೆಯ ಹೊಂಗೂದಲನ್ನು.
ಮಕರಂದ ಹೀರುವ ದುಂಬಿಯೆಲ್ಲಿ ?
ಈ ಅರಳಿದ ಪುಷ್ಪ : ಪುಟಿವ ಎದೆಗೆ ಸಾಂತ್ವನವೆಲ್ಲಿ ?

ನಿಟ್ಟುಸಿರಬಿಟ್ಟಳುಂ ಬಾಲೆ
ಗಂಡನ ಕೈ ಕಾಲುಂ ತಿಕ್ಕುತ ಹುಡುಗಿ
ಬಿಗಿದ ಕುಚಕುಂಕುಮವ ನೋಡಿದಳುಂ :
ಕಡ್ಡಿ-ಕೈಕಾಲುಂ-ಶೀತಲ ದೇಹದ
ಗಂಡನಲ್ಲಿ ಸುಖದ ಮಡುವು ತುಂಬುವುದೇ ?
ತುಂದಿ ಮೊಲೆಯುಲ್ಲಿ ಇಳಿದ ಬೆರಳಿನಾಟ
ಹೊಕ್ಕುಳ ತಿರುಗಣಿ ಮಡುವಿನಲ್ಲಿ ಕತ್ತಲೆ ಬೆಳಕಿನಾಟ
—ತಿಳಿಯುತ್ತಾ
ಮುಂದು ಮುಂದಕೆ ಕನಸಿನಾಟ.

ಎದೆಗೆ ಹೊತ್ತಿಗೆ ಬೆಂಕಿ
ಹಾಡಿಗೆ ಶ್ರುತಿಯು ಬಯಸಿದೆ ತೊಡೆ
ಕಟ್ಟಿಗೆ ತುಂಡು ಈ ಗಂಡ
ಜುಟ್ಟಿಗೋ ನಾಲಿಗೆಯು ಚಾಚಿದೆ ಗಂಡು
ನೀರಸ ಕಣ್ಣಿನ ನಿರುದ್ವೇಗದ ಒಣಜೀವ–ಈ ಗಂಡ.

ತಳಕ್ಕನೆ ಬೆಂಕಿಯಿಂದೆದ್ದ ಹೊಗೆಯಂತೆ
ಹೋಮಕ್ಕೆ ಹೈದ ತುಪ್ಪದಂತೆ
ಕುಣಿವ ನವಿಲ ಕಣ್ಣಿಗಳಿಗೆ ಚಿನ್ನದ ಗೆರೆಗಳಂತೆ
ಬಂದ ರಾಜ ಕೈ ಹಿಡಿದ–ಕಟ್ಟಿಗೆಯಂತಿರುವ ಗಂಡನೆದುರಿಗೆ.

ಋತುಕಾಲದ ಬೆಂಕಿಗೆ
ವಡಬಾಗ್ನಿಯು ಕೆದರಿದಂತೆ
ಮುನಿ ಸತಿಯು ಕೊಂಡೊಯ್ದು
ಆದುದಿಷ್ಟೆ : ನೆನಪಿನ ಚರಿತ್ರೆಯಲ್ಲಿ ಹೊರಳುಕಲ್ಲುಂ
ಮಗ ಕೇಳಿದ ಮುನಿ ಮೌನವಾಗಿಯೇ ಇದ್ದ.

(ಶ್ವೇತಕೇತು ಧ್ಯಾನದ ಹೊತ್ತಣಿಯನ್ನು ಬಿಚ್ಚಿದ. ಕಾಲಕ್ಕೆ ರೆಕ್ಕೆ ಬಂತು. ಉಬ್ಬಸದ ತಂದೆಯೆದೆಯಲ್ಲಿ ಹತ್ತಿದ ಗೂರಲು ಇತಿಹಾಸದ ಗೂರಲಾಗಿರಲಿ ಎಂದು ಯೋಚಿಸಿದ. ಚರಿತ್ರೆಯ ಪುಟದಲ್ಲಿ ತನ್ನದೊಂದು ಕಲ್ಲನ್ನು ಇರಿಸಿದ. ಶಾಪವಾಯಿತು ಹೆಣ್ಣಿಗೆ: )

ನಾರಿಯಾದವರೋ ಗಂಡನ ತೊರೆದು
ಬಯಕೆಯ ಬಿಸಿಲು ಗುದುರೆಯೇರಿ
ಹೊರಟವಳು ನರಳಲಿ–ಇಹದಲ್ಲಿ.
ಬಯಕೆ ಬೆಂಕಿಗೆ ಬೀಳಲಿ ನೀರು
ಗಂಡನ ತೊರೆದವಳ ಸಾವಿಗೆ
ತೆರೆದಿರಲಿ ನರಕದ ಬಾಗಿಲು.
ಪತಿವ್ರತೆಯಾಗಲಿ ಹೆಣ್ಣೆ
ತೊರೆದರೆ ಕೊಳೆತು ನಾರಲಿ ದೇಹ,
ಶಾಪ ಕೊಟ್ಟವನು ಶ್ವೇತ ಕೇತು :
ತನ್ನ ತಂದೆ-ತಾಯಿಯ ಬಿಟ್ಟು ಹೊರಟನು ತಪಸಿಗೆ.

ಸಮಸ್ಯೆ ಉಳಿಯಿತು ಹಾಗೆ. ಕುಟುಂಬ ಹುಟ್ಟಿತು ಹೀಗೆ : ರೋಗಿಷ್ಟ ಮುನಿಸತ್ತನೇ ? ಅರಸನ ಜೊತೆ ಹೋದವಳು ಮುತ್ತು-ರತ್ನ ಖಚಿತ ಒಡವೆಗಳ ಮೈಯೆಲ್ಲಾ ತುಂಬಿಕೊಂಡ ಹೆಣ್ಣೆ ಏನಾದಳು? ಚರಿತ್ರೆಯು ಗಾಳಿಯುರುಳಿದೆ. ವರ್ಷ ಕಳೆಯಿತು ಹಲವು. ಇಪ್ಪತ್ತನೆಯ ಶತಮಾನದ ಉತ್ತರಾರ್ಧದಲ್ಲಿ ದಕ್ಷಿಣಕನ್ನಡದ ಕಳಂಚಿ ಮಲೆಕಾಡಿನ ಪಕ್ಕದ ಉಕ್ಕುಡ ಗ್ರಾಮದ ಮೂಲೆಯಲ್ಲಿ ಕಲ್ಲು-ಕಾಡಿನ ನಡುವೆ ಸೋಗೆಯ ಮನೆಯಲ್ಲಿ ಮತ್ತೆ ಮುಂದುವರಿಯಿತು ಘಟನೆ :

ಕುಟುಂಬ ಒಡೆಯುವುದು ಹೇಗೆ ? :

ಕಾಮ ಚುಂಬಿತ ರಾತ್ರಿಯಲ್ಲಿ
ಮೆಲ್ಲನೆ ಹೂಗಳು ಅರಳುತ್ತವೆ
ನಿಧಾನವಾಗಿ ತುಟಿದಳಗಳು ಅಲುಗುತ್ತವೆ
ಮೆಲ್ಲನೆ ಬೀಸಿ ಬರುವ ಗಾಳಿಗೆ
ಅದರುತ್ತವೆ—ಅದಿರು ಅದಿರಾಗಿ.

ಬೆಳಕು ಕತ್ತಲೆಯ ಒಡನಾಟ ಎಷ್ಟೊಂದು ಚೆನ್ನ ?
ಸುಖವ ಬೇಡುವ ನದಿಯು ಸೇರುವುದು ಇಲ್ಲಿ
ಒಳಗಿನೊತ್ತಡವೆಲ್ಲ ಸೆಳೆಯುವುದು ಹಾದಿ
ಕಾಲವ ಕಾದಿದೆ ಜೀವ, ಈ ದೇಹ.

ಕಾಲಾತೀತವಾದ ಕ್ಷಣವೆ ನಿಲ್ಲಿಲ್ಲಿ
ಕಿಡಿಯಾದ ಬೆಂಕಿ ಜ್ವಾಲೆಯಾಗಲಿ
ಅನಂತ ಕ್ಷಣಗಳ ಜೋಡಿಸು ಜೀವವೆ
ನಿಮಿಷವೆಲ್ಲವೂ ಗಂಟೆಯಾಗಲಿ
ಗಂಟೆಯೆಲ್ಲವೂ ದಿನವಾಗಲಿ-ವರುಷವಾಗಲಿ.

ಕಾಲಾತೀತವಾದ ಕ್ಷಣವೆ ನಿಲ್ಲಿಲ್ಲಿ
ಹೊಳೆ ತುಂಬ ತೇಲಿ ಬಂದವು ಮೋಡ
ಬಿಟ್ಟಿ ತುಂಬಿದ ಕಣಜ—ಹಸಿರು ಹೊನ್ನು
ಬೆಳ್ಳಿ ಬಂಗಾರದ ಮುತ್ತಿನೊಡವೆಯು ಖಚಿತರಾತ್ರಿ
ಸರಳ ಲೆಕ್ಕಕ್ಕಿದು-ಭಾಗಾಕಾರ ಲೆಕ್ಕಾಚಾರವೇ ?

ಮಿಂಚು ಹರಿದಾಡಿತು ಮೈಯ ತುಂಬಾ
ನಳನಳಿಸುವಜೂಲು ನಾಲಗೆ ಕಂಡು
ತುಟಿಯಲ್ಲಿ, ಮೂಡಿದವು ಕೆಂದಾವರೆ ಗಲ್ಲದಲ್ಲಿ
ಬೆರಳು ಸೋಂಕಿತು ಬೆರಳ—ವಿದ್ಯುತ್ಕರ್ಷ
ಎದೆಯು ತಿದಿಯೊತ್ತಿದಂತೆ ಬಂತು ಬಿಸಿಯುಸಿರು :
ಕಾಲಬೆರಳಿಂದ ಮುಡಿಯುವರೆಗಿನ ಕಾವ್ಯ ಹೊರಬಂದಂತೆ.

ಶಬ್ದ ತಬ್ಬಿದೆ ಅರ್ಥವ
ತಳವಿರದ ತಳಕೆ ನೂಕುವ ಬಟ್ಟೆ
ಚಿಲಿಪಿಲಿಯೆಂದೋದಿತು ಥೇಹ
ಕಾರ್ಮೋಡದ ಅಂಚನು ಸರಿಸಿದ ಕೈ ಬೆರಳು
ಕೊಂಡಿಕಳಚಿತು ಜ್ವಾಲಾಮುಖಿ ಸಿಡಿಯಿತು.

ಬೆವರ ಸೆಲೆಯೊಡೆಯಿತು—ನಾಳ—ನಾಳಗಳಲ್ಲಿ
ಕನಸಗುಳ್ಳೆಯೊಡೆಯಿತು.
ಕಾಲದಾಟಿತು ಅಂತರದಲ್ಲಿ
ನಿಟ್ಟುಸಿರ ಬಿಟ್ಟನು ವರ್ಷ
ತೃಪ್ತಿಯೊಡನೆ ಕನಸ ಹಿಡಿದಳು ಸ್ಮಿತ.

“ಬೆಳ್ಳಿಮೂಡಿತು ಸ್ಮಿತ
ಮತ್ತೆ ತೊಟ್ಟುಕೋ : ಉಡುಪು
ಕನಸುಗಳು ಬಿದ್ದಂತೆ ವಾಸ್ತವ ಬಂತು”

ಬೆಳ್ಳಿ ಚುಕ್ಕಿಗಳ ನಡುವೆ
ದೋಣಿ ಚಂದ್ರನ ಏರಿ
ಬಂಗಾರ ನತ್ತನ್ನು ಒತ್ತಿ ಹಿಡಿದು

ಅಲೆಯ ಮಂಪರಿನಲಿ ಮುಳುಗಿದ ಹುಡುಗಿ
ಸ್ಮಿತಾ ಮತ್ತೆ ಕೇಳಿದಳು :

"ಕಳೆದ ಹಾದಿಯಲ್ಲಿ ನೂರಾರು ಅಲೆಗಳು
ಅಲೆಗಳ ಮೇಲೆ ತೇಲುತ್ತಾ ಬಂದು
ಇಂದು ಹಿಡಿದಿದ್ದೇನೆ—ಮುತ್ತು ಹವಳದ ದ್ವೀಪ
ಸಾಕಿದುವೆ ಜನ್ಮಸಾರ್ಥಕ-ಕ್ಷಣದ ಬೆಳಕು ಅಮರ"

ಕಾಗೆ ಕೂಗಿತು : ತೆಂಗಿನಗರಿ ಮೇಲೆ ಕೂತು
ಕೋಳಿಮರಿಗಳು ಅಂಗಳಕೆ ರಂಗೋಲಿ ಬರೆದವು
ಮನೆಯಿಂದ ಹೊರಟ ವರ್ಷ–ಸ್ಮಿತ ಹೊರಟಳು
ತಳಕು ಬೆಳಕಿನ ನಗರಿಗೆ
ನಗರದಿಂದ ಕೆಂಪು ದೀಪದ ಅಡಿಗೆ
ಪತಂಗ ಸಾಯುತ್ತದೆ—ಬೆಳಗು ಕತ್ತಲಾಯಿತು.

(ಕೆಮ್ಮುತ್ತಾ ಕೂತಿದ್ದಾನೆ ಸ್ಮಿತಳ ಗಂಡ ಅಮರ. ಕೆಳಗೆ ಅಂಗಳದಲ್ಲಿ ಶ್ವೇತಕೇತು ಬುಗುರಿ ಆಡುತ್ತಿದ್ದಾನೆ : ).

"ಅಪ್ಪಾ, ಅಮ್ಮ ಹೋದುದೆಲ್ಲಿಗೆ"
ಕೆಮ್ಮುತ್ತಾ ನೋಡಿದ ಆಕಾಶಕ್ಕೆ :
ಆಕಾಶದಲ್ಲಿ ತುಂಬಿದೆ ಬೆಳ್ಮುಗಿಲು.
ಮತ್ತದೇ ಕತೆ:

ಕುಟುಂಬ ಒಡೆದಿದೆ :
ಬಿರುಕು ಬಿಟ್ಟಿದೆ ;
ಕಾಲದ ಚಕ್ರ ಉರುಳುತ್ತಲೇ ಇರುತ್ತದೆ.

# ತಲಕಾವೇರಿಗೆ

—ಎಚ್. ಎಸ್. ವೆಂಕಟೇಶಮೂರ್ತಿ

ಹುಟ್ಟೂರು ಬಿಟ್ಟು ಬಂದಿರುವ ಪರದೇಶಿ
ನನ್ನದೇ ನೆಲೆಯು ಹುಡುಕುತ್ತ ಹೊರಟು
ಸುತ್ತಿ ಸುತ್ತೀ ಸತ್ತು ಸುಣ್ಣವಾಗುತ್ತ, ಕತ್ತು
ತಿರುಹಿ ನೋಡದೆ ಇಷ್ಟು ದೂರ ಬಂದೆ.

ಬಾರೋ....ಬಾರೋ ...ಎಂದು ಕೂಗುತ್ತಿರುವೆ
ಇದು ಏಕಮುಖ ರಸ್ತೆ. ತಿರುಗಲಾರೆ.
ಕಾಂಕ್ರೀಟು ಕಾಡು, ಕಾರ್ಖಾನೆಗಳ ಸೈರನ್ನು. ಕಣ್ಣು
ಸೆಳೆವ ಬಣ್ಣದ ಬಟ್ಟೆ ಥಾನು ಥಾನು,

ನೀನು ತೂಗುತ್ತಿರುವ ಖಾಲಿ ತೊಟ್ಟಿಲ ಜೀಕು,
ತೂಗು ಗಿಲಕಿಯು ಕುಲುಕದೆಷ್ಟು ಕ್ಷೀಣ ?
ಕಿವಿಯೊಡ್ಡಿ ಕೇಳಿದರೂ ಸ್ಪಷ್ಟ ಕೇಳುತ್ತಿಲ್ಲ
ವೇಗದೊತ್ತಡ. ಸತ್ತ ಸಾವಧಾನ.

ಇದು ಸುಯೋಧನ ನೋಡು. ಹೋಗುವುದಷ್ಟೇ ಗೊತ್ತು;
ಸುಳಿ. ತಾವರೆ ದಳದ ನಡುವೆ ದುಂಬಿ.
ಹಿಂದೆಯೋ ಉಳಿದರೇ ಬಂದ ಬಾಂಧವರೆಲ್ಲ ?
ಶಿಬಿರದಲ್ಲೇಕಾಕಿ ಅಳುತ್ತಿರುವ ತಾಯಿ.

ಮುಂದೆ ಚಂಡ ಪ್ರಚಂಡ ಚಂಡೆಯಬ್ಬರಬಡಿತ
ಎಲ್ಲೋ ಗೊಲ್ಲರ ಹಳ್ಳಿಯಲ್ಲಿ ಮುರುಳಿ
ನಟ್ಟಿರುಳ ಮುಷ್ಕರ....ಕಿತ್ತುಹಳಿ....ಕೈಬಾಂಬು
ದಾರಿ ದುಷ್ಕರ. ನಾನು ಹೇಗೆ ಬರಲಿ ?

ಅಲ್ಲಿಂದ ಇಲ್ಲಿವರೆಗೆಲ್ಲು ನಿಲ್ಲದೆ ಬಂದೆ, ಈ
ಸುಡು ಮರಳ ತಲಕಾಡೆ ಕೊನೆಯ ನೆಲೆಯೆ ?
ಅಳುತ್ತಿರುವ್ಯಾ ತಾಯಿ. ಮರಳದಿದ್ದರು ಮರಳ
ಹುದುಲಲ್ಲಿ ನಾನು ಜೀವಂತ ಉಳಿಯೆ.

# ನನ್ನ ಪ್ರಾರ್ಥನೆ

—ಬಿ. ಚಿನ್ನಸ್ವಾಮಿ

"You chose not to love
But because she alone remained
Dedicated to silence"

—Mazisi Kunene.

೧. ಓ ಭರತವರ್ಷವೇ
ಓ ಸರ್ವಶ್ರೇಷ್ಟ
ಸಸ್ಯಹಾರಿ ಸಮಾಜವೇ
ನನ್ನ ಹೊರಗಿಟ್ಟ ಗುರಿಯೇನು

ಹುಟ್ಟು ಸಾವುಗಳ ಮಧ್ಯೆ ನನ್ನನ್ನು
ಅಪಮಾನದ ಕೊಂಡಿಯಿಂದ
ಬಂಧಿಸಿ
ಹಿಂಸೆಗೀಡುಮಾಡಿದ ಪರಿಯೇನು

ಓ ಪರಶುರಾಮನೆ
ವೀರಕ್ಷತ್ರಿಯರ ಕುಲಕ್ಕೆ
ಕೊಡಲಿಯಿಟ್ಟು ಮೂರು ಬಾರಿ
ಭೂಪ್ರದಕ್ಷಿಣೆ ಮಾಡಿದ ನಿನಗೆ
ಅಸ್ಪೃಶ್ಯರ ಕಂಡು ಅಸಹ್ಯ ಉಂಟಾಗಲಿಲ್ಲವೆ

ಓಹ್ ಅವರೆಲ್ಲ ನಿನ್ನ ದಾರಿ ನೋಡುತ್ತಾ
ಗಿಡದ ಬುಡ, ಪೊದೆಯ ಮರೆಗಳಲ್ಲಿ
ಮುಖಮುಚ್ಚಿ ಅವಿತುಕೊಂಡಿರಲಿಕ್ಕೂ ಸಾಕು

ಅಥವಾ
ಯಾವುದೋ ಶಾಪವಿಮೋಚನೆಗೆಂದು
ಮತ್ತೆ ಮರುಜನ್ಮ ಬೇಡವೆಂದು
ಮುಕ್ತಿಯನ್ನರಸಿ ನಿನ್ನ ಕೈಸೇರಿರಬಹುದಾದ

ಕೊಡಲಿ ; ಶಾಪಗ್ರಸ್ತ, ಬ್ರಾಹ್ಮಣನಿರಬೇಕು
ನನ್ನ ಪೂರ್ವಜರನ್ನು 'ಕೊಚ್ಚಲು'
ಮೈಲಿಗೆಯ ನೆಪವೊಡ್ಡಿ 'ಒಲ್ಲೆ' ಎಂದಿರಬೇಕು.

೨. ಊರಾಚೆ ಅಟ್ಟುವ ಬದಲು
ದಡದಾಚೆ ನೂಕಿದ್ದರೆ ಸಮುದ್ರದೊಳಗಡೆ
ಸ್ವಾಭಿಮಾನದ ಮೀನುಗಳಾಗುತ್ತಿದ್ದೆವು
ಮೊಸಳೆಯೊಳಗೆ ಮೊಸಳೆಗಳಾಗಿ
ತಿಮಿಂಗಿಲದೊಳಗೆ ತಿಮಿಂಗಿಲಗಳಾಗಿ
ಸ್ವೇಚ್ಛೆಯಿಂದ ನೀರ ದಾರಿಯಲ್ಲಿ
ಅಲೆಯುತ್ತಿದ್ದೆವು

ಓ ಜಡ ಭಾರತವೇ
ನನ್ನ ಅವಮಾನದ ಕೊಂಡಿ ಕಳಚುವುದಿರಲಿ
ನಿನ್ನೊಡಲೊಳಗೆ ಕಾಲುಭಾಗದಷ್ಟು
ಕಸತುಂಬಿಕೊಂಡಿದ್ದರೆ ನಿನ್ನ
ಅನಾರೋಗ್ಯಕ್ಕೆ ನಾನು ಮರುಕಪಡುವೆ

---

## ಕೊಳೆಗೇರಿಯ ಸಂಜೆಗಳು

---

—ಎಸ್. ಉಮಾ

ಅದೆಷ್ಟು ಕರಾರುವಾಕ್ಕು ಈ ಸೂರ್ಯ !
ತನ್ನ ಪಾಡಿಗೆ ತಾನು ಹೊರಟುಬಿಡುತ್ತಾನೆ
ಕತ್ತಲೆಗೆ ನೂಕಿ, ಜೋಪಡಿಗಳ
ಎಂದೋ ಒಮ್ಮೆ,
ಕಾಣುವ ಬೆಳಕಲ್ಲಿ ಮುಖ ನೋಡಿ ನಕ್ಕವರು,
ಸಂಜೆಯಾಗುತ್ತಲೆ ಮುದುಡುತ್ತಾರೆ
ಹಗಲು ಕಾಯುವುದಿಲ್ಲ ಇವರಿಗೆ

ರೆಕ್ಕೆ ಬಿಚ್ಚಿದ ಹಕ್ಕಿ ಹಾರುವುದಿಲ್ಲ ಇಲ್ಲಿ
ಕಂಡವರ ಕಣ್ಣಲ್ಲಿ ಪ್ರೀತಿ ಅರಸುವ ಹುಚ್ಚಿಗೆ
ತೋಯುವುದಿಲ್ಲ ಎದೆ,
ಹರಿದ ಕಂಬಳಿಯಾಚೆ ನಿಲ್ಲುವ ಕನಸುಗಳಿಗೆ
ವೈಲಿಗೆಯಾಗುತ್ತಾರೆ ಹುಡುಗಿಯರು.
ಹಾಲು ಚೆಲ್ಲಿದ ಬೆಳದಿಂಗಳಲ್ಲಿ
ಹಾದಿ ಸವೆಸುವ ಹುಡುಗನಿಗೆ
ತುಟಿ ಬಿರಿಯುವುದಿಲ್ಲ
ಜೊಲ್ಲು ಸುರಿಸುವ ನಾಯಿ
ಬೊಗಳುವುದು ಮಾತ್ರ ಕೇಳಿಸುತ್ತದೆ.
ಹೀಗೆ, ಈ ಮಂದಿಗೆ ಹಗಲೆಂಬುದೆ ಇಲ್ಲ
ರಾತ್ರಿಗಳೇ ಎಲ್ಲ.

## ನನಗು ನಿನಗು

—ಶ್ರೀಧರ ಪಿಸ್ಸೆ

ನನಗು ನಿನಗು
ಕಣ್ಣು ಮೂಡಿ
ನವಿಲು ನರ್ತನ
ಕನಡಿಯೊಳಗೆ
ಕನಡಿ ಕೂಡಿ
ಮೊರೆವ ಕಾಮನ
ಜೀವದಾಳ
ಮೊರೆದು ಭಾವ
ರಾಗ ರಂಜನಾ
ನೀರಿನೊಳಗೆ
ಕಲ್ಲು ಬಿದ್ದು
ಗಮನ ಗೊಂದಲ
ಸಂತೆಯೊಳಗೆ
ಸೀರೆ ಬಿಚ್ಚಿ
ನಿಂತ ಅನುಭವ

ಆಸರೆ ಬೇಡಿ
ಸೆರೆಯು ಸೇರಿ
ಹುಚ್ಚು ವ್ಯೆಮನ

ಮನಸು ಮರಳಿ
ಕನಸು ಕೆರಳಿ
ತುರುಬು ತುಯ್ಯಲೆ?

ಪತಿಯು ಪ್ರಜೆಯು
ತೀರಾ ಹೀಗೆ
ನೂಕುವಾಟವೆ

ಕರಳು ಕೊರಗಿ
ಬೀದಿ ಬದುಕು
ಹಸನುಗೊಳಿಸದೆ ?

## ೧. ಅಳಲು

— ಎಂ. ಡಿ. ವಕ್ಕುಂದ

ಕೆರೆಯಂ ತೆರೆಗಳ ಮೇಲೆ ಹಗಲು ಕುಣಿಯುವ ಹಕ್ಕಿ
ಗಳ ಕಾಲು, ಹಸಿರು ಹಾವಿನ ನಾಲಿಗೆಯು ಸಾಲಂ
ಈ ನೆಲದ ಹುಡಿಯಲ್ಲಿ ರಾತ್ರಿ ಸೋರುವ ಸೋನೆ
ಹಸಿರಾಗದೆ ಬಸಿರಾಗದೆ ಎಲ್ಲಿ ಹೋಯಿತೋ ಕಾಣೆ
ಬೆಳದಿಂಗಳ ಮೈತುಂಬ ಬೆರಳಾಡಿಸುವ ಗಾಳಿ
ಗೂಸಿನ ಮೇಲೆ ನಕ್ಷತ್ರಗಳ ನಗೆಯು ದಾಳಿ
ದೊಡ್ಡ ಗುಡ್ಡದ ಮೇಲೆ ಬರಡು ಮರಗಳ ಸಾಲು
ಹಾದಿಯುದ್ದಕೂ ಹಳದಿ ಎಲೆಗಳ ಮೌನ ಹಾಡು
ಬೇಸಿಗೆಯು ಧಗೆಗೆ ಬಾಯ್ತೆರೆದ ಭೂಮಿ
ಮೋಡಗಳ ತೊಡೆಬಿಚ್ಚಿ ಬಾನು ಹೊಯ್ಯುವ ಉಚ್ಚಿ
ಬಳ್ಳಿಯೆಂದೆಯಿಂದ ಭಗ್ಗೆನುವ ಕಂಪು
ಕೇಡ ಸಂಪಿಗೆ ಹೂವು ತಳಿದೀತೆ ತಂಪು ?
ಭೂತದೆದೆಯಲ್ಲಿ ವರ್ತಮಾನದ ಪಿಳಿ ಪಿಳಿ ಕಣ್ಣು
ಗಳ ತುಂಬ ಭವಿಷ್ಯತ್ತು, ಎರಚುವ ಮಣ್ಣು !

## ೨. ಎಲ್ಲಿರುವೆ ನಾನೀಗ

ಏನಿದೇನಿದು ಹೆಜ್ಜೆ ಹೆಜ್ಜೆಗು
ಬಾಯಿ ತೆರೆದ ತಿಮಿಂಗಲು ?
ಎಲ್ಲಿಂದ ತಂದೀ ವಿಷದ ಹಲ್ಲಿನ
ಹಸಿರು ಹಾವಿನ ಹಿಂಡನು ?
ಕಣ್ಣ ಸೀಳಲು ಸೆಳೆಯುತಿರುವ
ನಕ್ಷತ್ರ ಮೀನಿನ ದಂಡನು ?
ಹಗಲು ರಾತ್ರಿ ಕಿವಿಯ ಕೊರೆಯುವ

ಗೊಟರಂ ಕಪ್ಪೆಯ ದನಿಯಂದು ?
ಸಾವಿಗಾಗಿ ಸಾವರಿಸಿ ನಿಂತ
ಜಲಚರಗಳ ಗಣೆಯುನು ?

ನೀರಿನಲ್ಲಿ ಎಂಥ ಕಾಡು ; ಕಾಡಿನಲ್ಲಿ ದಟ ಮೌನ
ಮೌನದಲ್ಲಿ ಹಕ್ಕಿ ಹಾಡು ; ಹಾಡಿನಲ್ಲೇ ಹುಲಿಗಳು !

ಅತ್ತಕಡೆ ಕೈ ಮಾಡಿ ಕರೆವ
ನನೂರ ಕೆರೆಯ ಅಂಗಳ
ಹಳ್ಳ ಕೊಳ್ಳ ಕೆರೆ ಬಾವಿ ತಳದಲಿ
ಚಂದಿರನ ಹೆಣದ ಬೆಳದಿಂಗಳು.

ಎರಡು ಕವನಗಳು

## ೧. ಬೇಡ ಹುಡುಗ

—ಎಸ್. ಜಿ. ಸಿದ್ಧರಾಮಯ್ಯ

ಹಗಲು ಇರುಳು ರೆಕ್ಕೆಬಿಚ್ಚೋ
ಕಣ್ಣು ಹಾಕಿದರೂನು ಕಾಣದ ಸತ್ಯ
ಮುಡಿಗಿಕೊಂಡ ಬಡವಿ

ದಿನವೂ ತಬ್ಬೋ ಎದೆಯ ಬಾವು
ಕುದ್ದು ಕುದ್ದು ಉಕ್ಕೋ ಎಸರು

ಬೀಸೋ ಗಾಳಿ ಹರಿಯೋ ನೀರು
ಕೂಡಿ ಕತೆ ಹಾಡಿ
ನಿಂತ ನೆಲ ಫಲವಂತಿ

ಕೊರಳ ಒಗರು ಮಾವ ಚಿಗುರು
ಸುತ್ತು ಮುತ್ತಿ ಲಜ್ಜವಂತಿ

ಅವ್ವ ಕೊಟ್ಟ ಕೊಡನು ಅಲ್ಲ
ಅಪ್ಪ ಕೊಟ್ಟ ಪವನು ಅಲ್ಲ
ಕುದ್ದು ಕುದ್ದು ಉಕ್ಕೋ ಎಸರು
ಕಾಡಿನೊಳಗೆ ಕೈಯ ತಟ್ಟಿ
ಕಣ್ಣ ಕಟ್ಟಿ ಎದೆಯ ಮುಟ್ಟಿ
ಎಲ್ಲಿ ಹೋದೆ ಎತ್ತ ಹೋದೆ

ಕೈಯ ಭರಣಿ ಎಸೆದು ಬರುವೆ
ಕೊರಳ ಮಣಿಯ ಹರಿದು ಬರುವೆ
ಎತ್ತ ಹೋದೆ ಎಲ್ಲಿ ಹೋದೆ

ಕಾಡ ಹುಡುಗ ಬೇಡ ಹುಡುಗ
ಕುದ್ದು ಕುದ್ದು ಉಕ್ಕೋ ಎಸರು.

## ೨. ನಂಬು

ಹೋದವರು ಹಾದಿ ಕಾಯುತ್ತಾ
ರೆಂಬ ನಂಬಿಕೆಯಿಲ್ಲ
ಆದ ಮಾತಿನ ಬೆದೆಗೆ
ನೆಲದಾಯಿ ಹೂಳು ಕುಳಿ

ನಿನ್ನೆ ಮೊನ್ನೆಯ ಹಾಗೆ
ತೆರೆದು ಮುಚ್ಚುವ ಕಾಂಡ
ನಾಳೆ ನಿನ್ನೆಯ ಹಾಗೆ
ಹಾಲು ನೆತ್ತರ ಭಾಂಡ

ಸಾವಿನೊಡಲನು ಸೀಳಿ
ತೇರು ಬೆಳಗುವ ಹಾಗೆ
ಉತಿದು ಸೀಯದೆ ಇರಲಿ
ವರ್ತಮಾನದ ಹಾಳೆ

ಮೋಡದೊಡಲಿನ ಮಿಂಚು
ನೆಲವ ಫಲಿಸುವ ಹಾಗೆ
ಕಮರಿ ಹೋಗದೆ ಬರಲಿ
ಎದೆಯ ತುಂಬಿದ ಬಿತ್ತ.

# ನಾ. ಮೊಗಸಾಲೆ ಅವರ 'ಪ್ರಭವ'ದಲ್ಲಿ ಅನ್ವೇಷಣೆ

ಪ್ರಭವ ಎಂಬುದು ಅರವತ್ತು ಸಂವತ್ಸರಗಳಲ್ಲಿ ಮೊಟ್ಟ ಮೊದಲನೆಯದು. ಒಂದು ಕಾಲಾವಧಿ ಮುಗಿದು ಹೊಸದೊಂದು ಆರಂಭವಾಗುವದಕ್ಕೆ ಸಂಕೇತ. ನಾ. ಮೊಗಸಾಲೆಯವರ 'ಪ್ರಭವ' ಸಂಕಲನ ವೈವಿಧ್ಯಮಯ ವಸ್ತುವನ್ನೊಳಗೊಂಡಿದೆ. ಇವರ ಕವಿತೆಗಳು ಉಪಮೆ, ರೂಪಕ, ಪ್ರತಿಮೆಗಳಿಂದ ಮನಸ್ಸು ತುಂಬುತ್ತವೆ.

ನನ್ನ ಗಮನ ಸೆಳೆದ 'ಕವಿತೆ ಮತ್ತು ಕನ್ನಡಕ' 'ಕಾವ್ಯವೂ ಗಾಣದಚ್ಚಿನ ಶೈಲಿಯೂ' 'ಪ್ರಭವ', 'ಪ್ರೇಮಗೀತ', 'ಮತ್ತೆ ಕನ್ಯಾನಕ್ಕೆ' 'ನಾಥೂರಾಮಗೋಡ್ಸೆ' ಮತ್ತು 'ಆಗಸ್ಟ್ ಹದಿನೈದು' ಇತ್ಯಾದಿ ಕವನಗಳು ವಿಶಿಷ್ಟವಾಗಿವೆ.

ಭಾವನೆಯೇ ಪ್ರಮುಖ ಪಾತ್ರ ವಹಿಸಿರುವ 'ಪ್ರೇಮಗೀತ' ಮತ್ತು 'ಮತ್ತೇ ಕನ್ಯಾನಕ್ಕೆ' ಈ ಎರಡು ಕವಿತೆಗಳಲ್ಲಿರುವ ಸೂಕ್ಷ್ಮ ವ್ಯತ್ಯಾಸ ಅಭ್ಯಾಸ ಯೋಗ್ಯವಾಗಿದೆ. 'ಪ್ರೇಮಗೀತ'ದ ಕವಿ ಮಧ್ಯ ವಯಸ್ಸಿನವನು. ಅಲ್ಲಿಂದ ತನ್ನ ದಾಂಪತ್ಯವನ್ನು ಪ್ರೇಮವನ್ನು, ಮಡದಿಯ ತಾಯಿ ಮನಸ್ಸನ್ನು ಗ್ರಹಿಸಿದ್ದಾನೆ. ಅದೇ ರೀತಿ 'ಮತ್ತೆ ಕನ್ಯಾನಕ್ಕೆ' ಕವಿತೆಯಲ್ಲಿ—"ಉಗಿ ಬಂಡಿ ಓಡುತಿದೆ ಬಾಲ್ಯವ ಕಳೆದ ಕನ್ಯಾನಕ್ಕೆ" ಎಂದುಕೊಂಡು ತನ್ನ ಪ್ರೀತಿಯ ಪರಿಸರದತ್ತ ಸಾಗಿದ್ದಾನೆ. 'ಪ್ರೇಮಗೀತ'ದಲ್ಲಿ ವ್ಯಕ್ತಿ ವ್ಯಕ್ತಿಯ ಸಂಬಂಧ ಸ್ಥಾಯಿಯಾಗಿದ್ದರೆ, 'ಮತ್ತೆ ಕನ್ಯಾನಕ್ಕೆ' ಪದ್ಯದಲ್ಲಿ ವ್ಯಕ್ತಿ ಮತ್ತು ಪರಿಸರದ ಸಂಬಂಧ ಸ್ಥಾಯಿಯಾಗಿದೆ. ತನ್ನ ಮತ್ತು ಮಡದಿಯ ಸಂಬಂಧ ಕೇವಲ ಯೌವನದ ಕಾವಿನಲ್ಲಿ ಗಟ್ಟಿಗೊಂಡು ಕಳೆದುಹೋಗಿಲ್ಲ. ಆದರೆ ತನ್ನ ಪ್ರೀತಿಯ ಪರಿಸರದೊಡನೆ ತನ್ನ ಸಂಬಂಧವನ್ನು ಎಂದೊ ಕಳೆದುಕೊಂಡಿದ್ದಾನೆ. ಇದರಿಂದ ಮೇಲ್ನೋಟದಲ್ಲಿ ಒಂದೇ ರೀತಿಯದಾದ ಪದ್ಯವೆರಡರ ವ್ಯತ್ಯಾಸ ಸ್ಪಷ್ಟವಾಗುತ್ತದೆ. ಪ್ರೇಮಗೀತದಲ್ಲಿ ಸಂತೃಪ್ತಭಾವ ಕೊನೆಗೊಮ್ಮೆ ವಿಷಾದಕ್ಕೆ ತಿರುಗಿದ್ದು "ಕೊಡಲೆ ಇಲ್ಲ ನಾನವಳ ಕೈಗೆ ಒಮ್ಮೆಯಾದರೂ ಅವಳ ಕನಸುಗಳ" ಎಂಬ ಸಾಲುಗಳಲ್ಲಿ ವ್ಯಕ್ತವಾಗಿದೆ. ಆದರೆ 'ಮತ್ತೆ ಕನ್ಯಾನಕ್ಕೆ' ಪದ್ಯ ಮೂಲೆಯಲ್ಲೆಲ್ಲೋ ಅಸಂತೃಪ್ತಿಯಿಂದ ಪ್ರಾರಂಭವಾಗಿ, ವಿಷಾದಕ್ಕೆ ಸಾಗಿ, ಆಶಾವಾದದಲ್ಲಿ ಅಂತ್ಯಗೊಂಡಿದೆ. ಈ ರೀತಿಯ ಸೂಕ್ಷ್ಮವಾದ ಭಿನ್ನತೆಗಳು, ತಂತ್ರ ಮತ್ತು ಕಲಾತ್ಮಕತೆ, ಕವಿತೆಗೆ ಎದ್ದು ಕಾಣುವ ಗುಣವನ್ನು ಕೊಟ್ಟಿವೆ. ಅದ್ದರಿಂದಲೇ ನಾ. ಮೊಗಸಾಲೆ ಶಿಷ್ಟ ಭಾಷೆಯನ್ನು ಅಡಿಗರ ಕಾವ್ಯದ ಭಾಷೆ ಮತ್ತು ವ್ಯಂಗ್ಯವನ್ನು-ಈ ಎರಡು

ಪದ್ಯಗಳಲ್ಲಿ ಬಳಸಿದ ರೀತಿ ವಿಶಿಷ್ಟವಾಗಿದೆ. ಭಾಷೆ ಮತ್ತು ಭಾವದ ಬಗ್ಗೆ ಹೇಳುವಾಗ ಮತ್ತೊಂದು ಮಾತನ್ನು ಕೂಡ ಹೇಳುವುದು ಸೂಕ್ತವಾಗುತ್ತದೆ. ಅದೆಂದರೆ ಈ ಕವಿತೆಯ ಫಲ ಅರ್ಪಿತವಾಗತಕ್ಕದ್ದು ಗೋಪಾಲಕೃಷ್ಣ ಅಡಿಗರಿಗೆ ಎಂದು ಕವಿ ('ಅಡಿಗರಿಗೆ' ಎಂಬ ಪದ್ಯದಲ್ಲಿ) ಹೇಳಿದ್ದರಿಂದ ಈ ಫಲದ ತಾಯಿ ಬೀಜದ ವಾರಸುದಾರರು ಅಡಿಗರೆ ಎಂದು ಒಪ್ಪಿಕೊಂಡಿದ್ದು ಸರಿಯಾದದ್ದೇ ಆಗಿದೆ.

ಕವಿತೆಗಳು ವ್ಯಂಗ್ಯದಲ್ಲಿ ನೀಡಿದ ಪರಿಣಾಮಕ್ಕಿಂತ, ವ್ಯಂಗ್ಯವಲ್ಲದ ಕವಿತೆಗಳು ಉಂಟು ಮಾಡುವ ಪರಿಣಾಮ—ಅಧಿಕವಾಗಿದೆ.

**"ನಾಯಿ ಮರಿ ಕನಸ ಕಾಣುತ್ತಿತ್ತು ಆಕಾಶವೆ/ಮೊಲೆಯಾಗಿ ಇಳಿಯಬಾರದೆ ಬಾಯಿಗೆಂದು" ("ಪ್ರಕೃತಿ")**

ಇದೆ ರೀತಿಯಲ್ಲಿ 'ಅಹಲ್ಯೆ' ಎಂಬ ಕವನದಲ್ಲಿ-"ನಿಧಾನ ಬಂದಳು ಇವಳು ಹೆಣ್ಣಿಗೆ ಎದೆ ಮೂಡುವ ಹಾಗೆ" ಎಂಬ ಸಾಲುಗಳು ಕಲಾತ್ಮಕವಾಗಿ ಸಂವೇದನಾಶೀಲವಾಗಿವೆ.

ಮತ್ತೊಂದು ಗಮನಾರ್ಹ ಅಂಶ ಕವಿತೆಗಳ ಹರವು, ವಿಸ್ತಾರ. ಮನುಷ್ಯ ಸಂಬಂಧದಿಂದ ವಿಶ್ವರಹಸ್ಯವನ್ನು ವಿಶ್ಲೇಷಿಸುವವರೆಗೆ ಇವು ಚಾಚಿಕೊಂಡಿವೆ. "ವಿಜ್ಞಾನೇಶ್ವರನ ಸ್ವಗತಗಳು" ಎಂಬ ಕವನದಲ್ಲಿ—

> ಇದೆಯೋ ಇಲ್ಲವೊ ಕಾಣುವದು ಸ್ಥಿರವೋ ಅಸ್ಥಿರವೊ
> ಯಾರು ರಾಕ್ಷಸ ? ಯಾರು ಮಾನವಶ್ರೇಷ್ಠ ? ಯಾವದದು ದೈವತ್ವ ?

ಇದು ಏನು ವಿಶ್ವರಹಸ್ಯ ಎಲ್ಲಿ ಇದರಾದಿ" ಎಂಬ ರೂಪದಲ್ಲಿ ಮೇಲಿನ ಸಾಲುಗಳು ಸಂಕ್ಷೇಪ ರೂಪವೆಂಬಂತೆ ಕಂಡು ಬಂದಿದೆ.

ಕೊನೆಯಲ್ಲಿ ಕವನ ಸಂಕಲನದ ಶಿರೋನಾಮೆಯ ಪದ್ಯ 'ಪ್ರಭವ' ಮತ್ತು ಕವನ ಸಂಕಲನದ ಮುಖ್ಯ ಉದ್ದೇಶವಾದ ಅನ್ವೇಷಣೆಯನ್ನು ಶಿರೋನಾಮೆಯಾಗಿ ಪಡೆದ ಕವನವನ್ನು ವಿಮರ್ಶೆಗಾಗಿ ನೋಡಬಹುದೆಂದು ತೋರುತ್ತದೆ.

'ಪ್ರಭವ' ಕವನದ ಮೊದಲ ಸಾಲಿನಲ್ಲೇ ಕವಿ ಹೊಸದನ್ನು ಸ್ವಾಗತಿಸಿದ್ದಾನೆ. ಹೊಸದು ತರಬಲ್ಲ ಸಾಧ್ಯತೆಯ ಬಗ್ಗೆ ರೋಮಾಂಚನಗೊಂಡಿದ್ದಾನೆ.

> ಹೊರಟಿದ್ದೇನೆ ಮನೆಯಿಂದ ಬಾಗಿಲು ದಾಟಿ
> ಅಂಗಳದ ತುದಿಗೂ ಬಂದು ತುಂಬಿ ತುಳುಕುತ್ತಿದ್ದ ಕಣ್ಣುಗಳ ನಡುವೆ
> ತುಂಬಿಕೊಳ್ಳುತ್ತಾ ಪರಂಪರೆಯಂತೆ ಬೀಳ್ಕೊಡುವಾಗ ಚಿಕ್ಕಪ್ಪ
> ''ಇಕೊ ನಿನಗೆ ಹಿಡಿ'' ಎಂದು ಕೊಟ್ಟದ್ದು ಹಣವೆ ?
> ಗುಣವೆ ? ಅಥವಾ ಬಾಳಿನುದ್ದಕ್ಕೂ ನಂಬಿಕೊಂಡಿದ್ದ ನಂಬಿಕೆಯೆ ಧೈರ್ಯವೆ ?...........

ಈ ಸಾಲುಗಳು ಪರಿಣಾಮಕಾರಿಯಾಗಿವೆ. ಪರಂಪರೆಯ ಬಲೆಯಿಂದ ದೂರ ನಿಂತಿದ್ದೇನೆ ಎಂದರೂ, ಸಂಪೂರ್ಣ ಸ್ವತಂತನಾಗಿದ್ದೇನೆ ಎಂಬುದು ಸಾಧ್ಯವಾಗದೆ ಚಿಕ್ಕಪ್ಪನೆಂಬ ಭೂತಕಾಲ, ಪರಂಪರೆ ನೆನಪಾಗುತ್ತಲೇ ಇದೆ.

ನಾಳೆ ಬೆಳಗು ಹೊಚ್ಚ ಹೊಸದನ್ನು ತಂದೀತು ಎಂದು, ಭೂತದ ಕೊಂಡಿಗೆ ಸಿಕ್ಕಿಕೊಂಡಿರುವ ಭವಿಷ್ಯ ಅಪೂರ್ವ ಕಾಣಿಕೆಯನ್ನು ವರ್ತಮಾನಕ್ಕೆ ಕೊಟ್ಟೀತು ಎಂಬ ಅಖಂಡ ಆಶಾವಾದವನ್ನು ಕವಿ ಇಲ್ಲಿ ಕಂಡಿರುವದು ಗಮನಾರ್ಹವಾದದ್ದು. ಯಾಕೆಂದರೆ ಬದುಕಿನಲ್ಲಿ ನಾಳೆ ಏನೂ ಇಲ್ಲ ಬರಿದೆ ಕಗ್ಗತ್ತಲು ಎಂಬ ಭಾವ ವ್ಯಕ್ತಿಯನ್ನು ಕ್ಷಣ ಮಾತ್ರವು ಬದುಕಲಿಕ್ಕೆ ಬಿಡುವದು ಸಾಧ್ಯವಿಲ್ಲದ ಮಾತು.

ಇದೇ ನಿರಂತರತೆಯಲ್ಲೂ ಚಿರನೂತನದ ಕನಸು, ಮನುಷ್ಯನ ಅನ್ವೇಷಕ ಪ್ರವೃತ್ತಿಯ ಮೂಲ ಧಾತುವಾಗಿದೆ. ಆದ್ದರಿಂದಲೇ 'ಪ್ರಭವ ಕವಿತೆಯೊಡನೆ ಅನ್ವೇಷಣೆ' ಎಂಬ ಕವಿತೆಯನ್ನು ನೋಡಬೇಕಾಗುತ್ತದೆ. "ಅನ್ವೇಷಣೆ"ಯಲ್ಲಿ ಕತ್ತೆಯೊಂದು ತನ್ನ ಸಂಸಾರವನ್ನೆ ತೊರೆದು ಘಟ್ಟವೊಂದನ್ನು ಸುತ್ತು ಹಾಕಿ, ತನ್ನ ಸಂಸಾರವನ್ನೆ ಬೇರೆ ಸಂಸಾರ ಎಂದು ತಿಳಿದು, ತನ್ನ ಹೆಂಡತಿಯನ್ನು ಬೇರೊಂದು ಹೆಣ್ಣುಕತ್ತೆ ಎಂದು ತಿಳಿದು ಸಂತಸದಿಂದ ಸಂಸಾರ ಪ್ರಾರಂಭಿಸುತ್ತದೆ. ಈ ಕತ್ತೆ ಇಡಿ ಮಾನವ ಜನಾಂಗವನ್ನೇ ಪ್ರತಿನಿಧಿಸುವಂತೆ, ಕವಿತೆಯ ಧ್ವನಿಯಿದೆ. ನಮ್ಮೆಲ್ಲ ಅನ್ವೇಷಣೆಗಳು ವಾಸ್ತವಿಕವಾಗಿ ಅನ್ವೇಷಣೆಗಳೇ ಅಲ್ಲ, ಆವಾಗಲೇ ಕಂಡುಕೊಂಡ ಸತ್ಯಗಳು ಎಂಬ ಕವಿಯ ಜಿಜ್ಞಾಸೆ, ಯಾವದೇ ಹೊಸದನ್ನು ಅನ್ವೇಷಿಸುವುದಕ್ಕೆ ನಿರುತ್ಸಾಹಕ ಪ್ರತಿಕ್ರಿಯೆಯಾಗಿದೆ.

"ಪ್ರಭವ" ಕವನವಲ್ಲಿರುವ ಉತ್ಸಾಹದ ರೋಮಾಂಚನಕ್ಕೂ 'ಅನ್ವೇಷಣೆ'ಯ ನಿರುತ್ಸಾಹದ ಯಥಾ ಸ್ಥಿತಿ ವಾದಕ್ಕೂ ವೈಚಾರಿಕ ದ್ವಂದ್ವದ ಲಕ್ಷಣಗಳಿವೆಯೋ ? ಎಂಬುದು ನನ್ನ ಗುಮಾನಿ.

ಅಡಿಗರ ಕಾವ್ಯದ ತಂತ್ರ, ಭಾಷೆ, ವ್ಯಂಗ್ಯವನ್ನು ಹಾಗೂ ಧೋರಣೆಯನ್ನು ಈ ಕವಿ ಅನುಸರಿಸಿದ್ದಾರೆಯೆ ? ಎಂಬ ಗುಮಾನಿ ನನಗಿದ್ದರೂ ಈ ವೈಚಾರಿಕ ಪ್ರಶ್ನೆಗಳನ್ನು ಹುಟ್ಟು ಹಾಕಿರುವ "ಪ್ರಭವ" ಹಲವಾರು ಕಾರಣಗಳಿಗೆ ಉತ್ತಮವಾಗಿದೆ. ಪ್ರತಿಮಾಸೃಷ್ಟಿ, ಲಯ ಶುದ್ಧತೆ, ತಂತ್ರ ವೈವಿಧ್ಯಗಳು ಇದಕ್ಕಾಗಿ ಹೆಸರಿಸಬಹುದಾದ ಕಾರಣಗಳು.

('ಪ್ರಭವ'-ಡಾ॥ ಸಾ. ಮೊಗಸಾಲೆ, ಭಾಗ್ಯಲಕ್ಷ್ಮೀ ಪ್ರಕಾಶನ, ಬೆಂಗಳೂರು-85. ಪುಟ 94, ಬೆಲೆ ರೂ. 18/- [1989] — 1988 ರ ಸಾಲಿನ ಕವಿ ಕಡೆಗೋಡ್ಲು ಕಾವ್ಯ ಪುರಸ್ಕಾರ ಕೃತಿ)

—ಬಳಗುಳಿ ರವೀಂದ್ರಭಟ್ಟ

# ಕವಿರಾಜಮಾರ್ಗದ "ಧ್ವನಿಯೆಂಬುದಳಂಕಾರಂ"

—ಮಲ್ಲೇಪುರಂ ಜಿ. ವೆಂಕಟೇಶ್

'ಕವಿರಾಜಮಾರ್ಗ' ಕನ್ನಡದ ಪ್ರಪ್ರಥಮ ಲಕ್ಷಣಗ್ರಂಥ. ಇದು ಹಲವು ಬಗೆಯ ಅಧ್ಯಯನಗಳಿಂದ ಬೆಳೆದು ಬರುತ್ತಿದೆ. ಈ ಶತಮಾನದಲ್ಲಿ ಇದು ಪ್ರಕಟವಾದಂದಿನಿಂದ ಗ್ರಂಥದ ಒಂದೊಂದು ವಿಷಯವಾಗಿ ವಿಸ್ತಾರ ರೀತಿಯ ಬರೆವಣಿಗೆಯು ಕಾಣಿಸಿಕೊಂಡಿದೆ. ಹೀಗೆ ಹಲವು ಹತ್ತು ವಿಸ್ತಾರಗಳನ್ನು ಪಡೆಯುತ್ತಿರುವ ಈ ಲಕ್ಷಣಗ್ರಂಥದಲ್ಲಿ, ಅಪೂರ್ವವೂ ಹಲವು ಬಗೆಯ ವ್ಯಾಖ್ಯಾನಗಳಿಗೆ ಒಳಗಾಗಿರುವುದೂ ಆಗಿರುವ ಒಂದು ಕಂದ ಪದ್ಯ ಹಲವು ನಿಟ್ಟಿನ ಅಧ್ಯಯನಗಳತ್ತ ಸಾಗಿದೆ! ಇಷ್ಟು ಬಗೆ ಬಗೆಯ ಕುತೂಹಲಗಳಿಗೆ ಈಡಾಗಿರುವ ಆ ಪದ್ಯ ಹೀಗಿದೆ :

ಧ್ವನಿಯೆಂಬುದಳಂಕಾರಂ
ಧ್ವನಿಯಿಸುಗುಂ ಶಬ್ದದಿಂದಮರ್ಥದೆ ದೂಷ್ಯಂ।
ನೆನೆವುದಿದ ನಿಂತುಕಮಲದೊ
ಳನಿಮಿಷ ಯುಗಮೊಪ್ಪಿ ತೋರ್ಪುದಿಂತಿದು ಚೋದ್ಯಂ ॥ [3-209]

ಈ 'ಕಂದಪದ್ಯ' 'ಧ್ವನಿ'ಯನ್ನು ಕುರಿತು ಹೇಳುತ್ತಿದೆಯೆಂಬುದೇನೋ ಮೊದಲಿಗೆ ಸ್ಪಷ್ಟ. ಆದರೆ, ಇನ್ನಷ್ಟು ಮುಂದುವರೆದು ನೋಡಿದರೆ 'ಧ್ವನಿಯೆಂಬುದೂ ಒಂದು ಅಲಂಕಾರ'ವೆಂದೂ 'ಧ್ವನಿಯೆಂಬುದು ಅಲಂಕಾರಗಳಲ್ಲೇ ಅಂತರ್ಗತ' ಎಂಬುದೂ "ಧ್ವನಿಯೆಂಬುದಳಂಕಾರಂ" ಎಂಬ ಮಾತಿನಿಂದ ಅರ್ಥಪ್ರತೀತಿಯಾಗುತ್ತದೆ. ಆದರೆ, ಮುಂದಿನ ಮಾತಿನಲ್ಲಿ "ಧ್ವನಿಯಿಸುಗುಂ ಶಬ್ದದಿಂದಂ" ಎಂಬುದಕ್ಕೆ 'ಅರ್ಥವು ಶಬ್ದದಿಂದ ಸೂಚಿತವಾಗುತ್ತದೆ' ಎಂದೂ "ಅದು ಶಬ್ದದಿಂದ ಧ್ವನಿತವಾಗುತ್ತದೆ" ಎಂದೂ ಹೇಳಬಹುದು. "ಅರ್ಥದೆ ದೂಷ್ಯಂ" ಎಂದಾಗ "ಅರ್ಥದಿಂದಲೂ ಸೂಚಿತವಾಗುತ್ತದೆಯೆಂಬ ಮತ ದೂಷ್ಯ" ಎಂದೂ "ಅರ್ಥದಿಂದ ದೂಷ್ಯವಾಗಿರುತ್ತದೆ" ಎಂದೂ ಸಾಧಿಸಬಹುದು. "ನೆನೆವುದಿದ ನಿಂತು" ಎಂಬ ಮಾತು ಸರಳವಾಗಿದೆ. "ಕೆಳಗಿನಂತಹ ಲಕ್ಷ್ಯ ನೋಡಿ ನೆನಪು ಮಾಡಿಕೊಳ್ಳುವುದು." ಹಾಗಾದರೆ ಏನದು ಲಕ್ಷ್ಯ ; "ಕಮಲದೊಳನಿಮಿಷಯುಗಮೊಪ್ಪಿತೋರ್ಪುದು" ಎಂಬಲ್ಲಿಗೆ ಇಟ್ಟುಕೊಂಡರೆ 'ಅಲಂಕಾರಾಂತರ್ಭಾವವಾದ' ಮೇರೆಗೆ ಇದು ಅತಿಶಯೋಕ್ತಿಯ ಭೇದವೇ ಆಗುತ್ತದೆ. ಹಾಗಲ್ಲದೆ, "ಕಮಲದೊಳ ನಿಮಿಷಯುಗಮೊಪ್ಪಿತೋರ್ಪುದಿಂತಿದು ಚೋದ್ಯಂ" ಎಂದಾಗ "ಇದು ಧ್ವನಿಯೆಂಬ ಅಲಂಕಾರ. ಇಲ್ಲಿ ವಾಚ್ಯಾರ್ಥ ಅಸಂಗತ ಆದ್ದರಿಂದ ದೂಷ್ಯ" ಎಂದಾಗುತ್ತದೆ.

ಸ್ಥೂಲವಾಗಿ ಕಂದಪದ್ಯವನ್ನು ನೋಡಿದಾಗ, ಎರಡು ಭಿನ್ನ ಬಗೆಯ ಅರ್ಥ ಪ್ರತೀತಿಯಾಗುವ ಈ ಪದ್ಯದಲ್ಲಿ 'ಅಲಂಕಾರಾಂತರ್ಭಾವವಾದ'ವನ್ನೂ 'ಧ್ವನ್ಯಲಂಕಾರವಾದ'ವನ್ನೂ ಕಾಣಬಹುದು.[1] 'ಕವಿರಾಜಮಾರ್ಗ' ಕಾರನ ಕಾಲಕ್ಕೆ 'ಧ್ವನ್ಯಾಲೋಕ' ಇನ್ನೂ ಕಾಶ್ಮೀರದ ಕಡೆಯಿಂದ ಕರ್ನಾಟಕದ ಕಡೆ ಇನ್ನೂ ಬಂದಿರಲಿಲ್ಲ. 'ಧ್ವನಿ'ಯ ಬಗೆಗೆ ಅಷ್ಟೊಂದು ಪ್ರಾಚುರ್ಯ ಇನ್ನೂ ಆಗಿರಲಿಲ್ಲವೆಂದು ಹೇಳಬಹುದು. ಆನಂದವರ್ಧನ ಬಂದು 'ಧ್ವನಿವಾದ' ಮಂಡಿಸುವವರೆಗೂ 'ಧ್ವನಿಪ್ರಸ್ಥಾನ' ಕಾವ್ಯ ಮೀಮಾಂಸೆಯಲ್ಲೆ ಇನ್ನೂ ಸ್ಪಷ್ಟರೂಪ ತಾಳಿರಲಿಲ್ಲ. ಇದು ಸತ್ಯಸಂಗತಿ. ಮತ್ತೊಂದು ವಿಚಾರಾರ್ಹವಾದುದೆಂದರೆ ಕವಿರಾಜಮಾರ್ಗಕಾರನಿಗೆ 'ಧ್ವನಿವಾದ'ದ ಪರಿಚಯ ಇತ್ತೆಂಬುದಕ್ಕೆ ಯಾವುದೇ ರೀತಿಯ ಸುಳಿಹುಗಳು ಅವನ ಅಲಂಕಾರಗಳ ವಿವೇಚನೆಯಲ್ಲಿ ದೊರಕುವುದಿಲ್ಲ. ಅವನ ನಂತರ ಬಂದವರಲ್ಲೂ ಸಹ ಅವನ ಈ ವಿವೇಚನೆ ಕಾಣಬರುವುದಿಲ್ಲವೆಂಬುದು ಐತಿಹಾಸಿಕ ಸಂಗತಿ. ಈ ದೃಷ್ಟಿಯಿಂದ ನೋಡಿದರೆ ಈ ಕಂದ ಪದ್ಯದಲ್ಲಿ ಅವನು ಹೇಳುತ್ತಿರುವುದು "ಧ್ವನಿಯೆಂಬುದು ಅಲಂಕಾರ" ಎಂದಲ್ಲ "ಧ್ವನಿಯೆಂಬುದು ಅಲಂಕಾರಗಳಲ್ಲೇ ಅಂತರ್ಗತ" ಎಂದು ನಿರ್ಣಯವಾಗಿ ಮಂಡಿಸುವುದು ಉಚಿತವೆಂದು ತೋರುತ್ತದೆ. ಇಷ್ಟರಮಟ್ಟಿಗೆ ನಾವು ಈ ಮಾತನ್ನು ಅತಿವ್ಯಾಪ್ತಿಗೊಳಿಸದಂತೆ ಹೇಳಬಹುದೆಂದೂ ತೋರುತ್ತದೆ!

ಹೀಗೆ, ಬಗೆ ಬಗೆಯ ವಾಖ್ಯೆಗಳಿಂದ ತುಂಬಿರುವ ಈ ಕಂದ ಪದ್ಯದ ಬಗೆಗೆ ಕಳೆದ ನಾಲ್ವತ್ತು ವರ್ಷಗಳಿಂದ ಪ್ರತಿಕ್ರಿಯಿಸುತ್ತ ಬಂದ, ತಮ್ಮ ನಿಲುವುಗಳಿಂದ ವ್ಯಾಖ್ಯಾನಿಸಿದ ವಿವಿಧ ವಿದ್ವಾಂಸರ ಬರೆಹಗಳನ್ನು ಒಂದೆಡೆಗೆ ತಂದು ಕೊಡುವ ಉಪಕಾರವನ್ನು ಯು. ಕೃಷ್ಣಶರ್ಮ ಅವರು ಮಾಡಿರುವುದು ಶ್ಲಾಘನೀಯ. ಹಳೆಯ ಅಲೆಮಾರಿನ ದಿ. ಮುಳಿಯ ತಿಮ್ಮಪ್ಪಯ್ಯ, ತೀ. ನಂ. ಶ್ರೀ, ಭೀಮರಾವ್ ಚಿಟಗುಪ್ಪಿ, ಶಿ. ಚೆ. ನಂದಿಮಠ, ಎ. ಆರ್. ಕೃಷ್ಣಶಾಸ್ತ್ರೀ, ವಿದ್ವಾನ್ ಸೂರ್ಯನಾರಾಯಣಬಟ್ಟ, ಪಂ. ರತ್ನಾಕರ ಜೋಶಿ ಇವರಿದ್ದರೆ ನಂತರದ ಡಾ॥ ಕೆ. ಕೃಷ್ಣಮೂರ್ತಿ, ಎಂ. ಎಂ. ಕಲಬುರ್ಗಿ, ಸಿ. ಪಿ. ಕೆ, ವಿ. ಸೀ, ಸಿ. ವೀರಣ್ಣ, ಮಂಗಳಿ, ಎಂ. ವಿ. ಸೀ. ಇನ್ನೂ ಮೊದಲಾದವರು ಆನುಷಂಗಿಕವಾಗಿ, ಪ್ರಾಸ್ತಾವಿಕವಾಗಿ ಈ ಕಂದದ ಅರ್ಥವನ್ನು ಹೇಳಿದ್ದಾರೆ. ಪ್ರಮುಖವಾಗಿ ತೀ. ನಂ. ಶ್ರೀ ಮತ್ತು ಡಾ॥ ಕೆ. ಕೃಷ್ಣಮೂರ್ತಿ ಅವರ ನಿಲುವುಗಳನ್ನು ಹೀಗೆ ಸಂಗ್ರಹಿಸಬಹುದು.

---

1. ಇದನ್ನು ಸಂಕಲನಕಾರರಾದ ಯು. ಕೃಷ್ಣಶರ್ಮ ಅವರು ಚೆನ್ನಾಗಿಯೇ ಸ್ಪಷ್ಟವಾಗಿಯೇ ಗುರುತಿಸಿದ್ದಾರೆ.

ತೀ. ನಂ. ಶ್ರೀ ಅವರ ನಿಲುವು ಹೀಗಿದೆ: 'ಧ್ವನಿ'ಯ ಹೆಸರು ಕವಿರಾಜ ಮಾರ್ಗದಲ್ಲೇ ಕಾಣಿಸುತ್ತದೆ. ಕವಿರಾಜಮಾರ್ಗಕಾರ 'ಧ್ವನ್ಯಾಲೋಕ' ನೋಡಿದ್ದಕ್ಕೆ ಪುರಾವೆ ಇಲ್ಲ. ಭಾವಿಕಾಲಂಕಾರದ ಬಳಿಕ "ಧ್ವನ್ಯಲಂಕಾರ"ವನ್ನು ಹೇಳಿದ್ದಾನೆ. ಅವನ ಉಕ್ತಿಗೆ, ಸರಿಯಾಗಿ ಅರ್ಥ ಹೇಳಲು ಪೇಚಾಟ. ಸಂಸ್ಕೃತ ಲಕ್ಷಣಗ್ರಂಥದ ಯಾವ ವಿವರಣೆಯೂ ಇಲ್ಲಿಗೆ ಹೊಂದಿಸಿ ವ್ಯಾಖ್ಯಾನಿಸಲು ಆಗುವುದಿಲ್ಲ. 'ಶಬ್ದ ಶಕ್ತಿ ಮೂಲಧ್ವನಿ'ಯನ್ನೇನಾದರೂ ಹೇಳುತ್ತಿದ್ದಾನೆಯೇ ? ಎಂದು ಉದಾಹರಣೆ ಯನ್ನು ಗಮನಿಸಿದರೆ, ತೊಡಕನ್ನು ಬಿಡಿಸುವ ಬದಲು ಇನ್ನಷ್ಟು ಜಟಿಲವಾಗುತ್ತದೆ. ರೂಪಕಾತಿಶಯೋಕ್ತಿಯನ್ನೇ 'ಧ್ವನ್ಯಾಲಂಕಾರ' ಎಂದು ಹೇಳುತ್ತಿದ್ದಾನೆಯೇ ಎಂದರೆ, ಕೊಟ್ಟಿರುವ ಲಕ್ಷಣ ಉಕ್ತವಾಗಿಲ್ಲ. ಸದ್ಯದ ಊಹೆಯಿಂದ ಹೇಳಬಹುದಾದದ್ದು, ಆನಂದವರ್ಧನನ ಧ್ವನ್ಯಾಲೋಕ ಮಾತ್ರವಲ್ಲ; ಧ್ವನಿಕಾರಿಕೆಗಳನ್ನೂ ನೋಡಿಲ್ಲ. ಅವನ ಭಾಗಕ್ಕೆ 'ಧ್ವನಿ' ಎಂಬುದು ಪ್ರವಾದ ಮಾತ್ರ. ಕಾಶ್ಮೀರದಲ್ಲಿ 'ಧ್ವನಿ'ಯ ಕೂಗು ಇತ್ತೀಚೆ ಎದ್ದಿದೆ. ಇದನ್ನು 'ಕಾವ್ಯ ಶೋಭಾಕರ' ಎಂದು ಗಣಿಸುತ್ತಿದ್ದಾರೆ, ಎಂದು ಯಾರಿಂದಲೋ ಕೇಳಿ ತನ್ನ ಅಲಂಕಾರಗಳ ಪಟ್ಟಿಗೆ ಅದನ್ನು ಸೇರಿಸಬೇಕೆಂಬ ಸ್ವಾಭಾವಿಕ ಆಶಯದಿಂದ ಕವಿರಾಜಮಾರ್ಗಕಾರನು ತನಗೆ ತಿಳಿದು ಬಂದ ಸ್ವಲ್ಪ ವಿಷಯದ ಅವಲಂಬನೆಯಿಂದ ಅವನ್ನು ಕುರಿತು ಒಂದು ಮಾತನ್ನು ಹೇಳಿದನೆಂದು ತೋರುತ್ತದೆ.

(ಭಾರತೀಯ ಕಾವ್ಯ ಮೀಮಾಂಸೆ-ಪ್ರ. ವಿ. ಪ್ರಕಟಣೆ, 1973 ಪುಟ : 365— ನಾಲ್ಕನೆಯ ಮುದ್ರಣ)

ಡಾ॥ ಕೆ. ಕೃಷ್ಣಮೂರ್ತಿ ಅವರ 'ನಿಲುವು'ಗಳನ್ನು ಈಗ ನೋಡಬಹುದು : ಕವಿರಾಜಮಾರ್ಗಕಾರನು ತನ್ನ ಅಲಂಕಾರಗಳ ನಿರೂಪಣೆಯನ್ನು ಮುಗಿಸುವಷ್ಟರಲ್ಲಿ ಕರ್ಣಾಕರ್ಣಿಕೆಯಾಗಿ ಹೊಸ ಕಾವ್ಯ ತತ್ತ್ವವೆಂದು ಹೇಳುತ್ತಿದ್ದ 'ಧ್ವನಿ'ಯ ಬಗೆಗೆ ಯಾರೋ ಪ್ರಸ್ತಾಪ ಮಾಡಿರಬೇಕು. ತನ್ನ ಮತದಲ್ಲಿ ಅದೂ ಒಂದು ಅಲಂಕಾರವೇ ಆದೀತು ಹೊರತು ಅದಕ್ಕಿಂತ ಹೆಚ್ಚಿನ ಕಾವ್ಯದ 'ಆತ್ಮ'ವಾಗಲು ಅದಕ್ಕೆ ಅರ್ಹತೆ ಯಿಲ್ಲವೆಂದು ಈ ಗ್ರಂಥಕಾರನು ಇಲ್ಲಿ ಸೂಚಿಸುತ್ತಿದ್ದಾನೆ. 'ಪೀಠಿಕಾವಾಕ್ಯ'ದಲ್ಲಿ ಇಂತಿಷ್ಟು ಅಲಂಕಾರಗಳನ್ನು ಹೇಳುವೆನೆಂದು 'ಧ್ವನಿ'ಯ ಹೆಸರು ಬಾರದಿರುವುದೂ ಇನ್ನೇನು ಅಲಂಕಾರಗಳ ನಿರೂಪಣೆ ಮುಗಿಯಿತೆನ್ನುವಾಗ ಇದು ಇಲ್ಲಿ ಬಂದಿರುವುದೂ ಈ ಊಹೆಯನ್ನು ಸಮರ್ಥಿಸುತ್ತದೆ. ಇಲ್ಲಿ ಕೊಟ್ಟಿರುವ ಉದಾಹರಣೆಯಲ್ಲಿ ಮೇಲ್ನೋಟಕ್ಕೆ ಮೀನ ಶಬ್ದದ ವಾಚ್ಯಾರ್ಥ ದೋಷಯುಕ್ತವೆಂಬಂತೆಯೇ ಇದೆ. ಕಮಲದಲ್ಲಿ ಮೀನುಗಳೆರಡು ಸೊಗಸಾಗಿ ಕಾಣುವುದು ಅಸಂಭವವಾದ್ದರಿಂದ. ಆದರೆ, ಮೀನ ಎಂಬ ಶಬ್ದದಿಂದ ಅಭಿವ್ಯಂಗ್ಯ ಎಂದರೆ ಸೂಚ್ಯವಾದ ಅರ್ಥ ಮೀನಲ್ಲ.

ಮೀನಿನಂತೆ ಮಿನುಗುವ ಕಣ್ಣುಗಳೆರಡಂ ಎಂಬುದು. ಸೂಚ್ಯಾರ್ಥವನ್ನು ಅರಿತಾಗ ದೋಷ ಪರಿಹಾರವಾಗುವದು. ಆನಂದವರ್ಧನನ ಸಮಕಾಲೀನನಾದ ಕರ್ನಾಟಕದ ಲಕ್ಷಣಕಾರ 'ಧ್ವನಿ' ಹೆಸರಿಸುವುದು ಹೆಮ್ಮೆಯ ಸಂಗತಿ. ಯಾರು ಏನೇ ವಾದಿಸಿದರೂ ಧ್ವನ್ಯಾಲೋಕಕ್ಕೆ ಮುಂಚೆ ಕಾವ್ಯ—ಲಕ್ಷಣ ಪ್ರಕ್ರಿಯೆಯಾದ 'ಧ್ವನಿ' ಸಮಾಮ್ನಾತ ಪೂರ್ವವಾಗಿದ್ದುದಕ್ಕೆ ಒಂದೇ ಆಧಾರವೂ ಸಿಕ್ಕಿಲ್ಲ. ವೈಯಾಕರಣರ 'ಸ್ಫೋಟ' ಇದು ವಿಸ್ತರಣಗೊಂಡೇ 'ಧ್ವನಿ'ಯೆಂಬ ಕಾವ್ಯಲಕ್ಷಣ ಪ್ರಸ್ತುತವಾಯಿತೆಂಬ ಆನಂದ ವರ್ಧನನ ಸ್ಪಷ್ಟೋಕ್ತಿಯಿದೆ. ಪುಸ್ತಕರೂಪದಲ್ಲಿ ಪ್ರಕಟವಾಗದಿದ್ದರೂ 'ಧ್ವನಿ' ಯೆಂಬ ಕಾವ್ಯತತ್ತ್ವದ ಪ್ರಚಾರ ಮುಖೋದ್ಗತವಾಗಿ ಸಹೃದಯರ ಮಂಡಲಿಗಳಲ್ಲಿ ನಡೆಯುತ್ತಿತ್ತೆಂಬ ಊಹೆ ಅಭಿನವಗುಪ್ತನದಾಗಿದೆ. ಇದಕ್ಕೆ ಪ್ರಬಲ ಸಮರ್ಥನೆ ಕವಿ ರಾಜಮಾರ್ಗದ ಪ್ರಸ್ತುತ ಉಲ್ಲೇಖ (ಕವಿರಾಜಮಾರ್ಗಂ-ಐ. ಬಿ.ಎಚ್. 1983 ಪುಟ 158) ಇಷ್ಟಾದರೂ ಕೆ.ಕೃಷ್ಣಮೂರ್ತಿ ಅವರು ಇನ್ನು ಮೂರುಕಡೆ ಈ ವಿಷಯವನ್ನು ಕುರಿತು ಪ್ರಸ್ತಾಪಿಸಿದ್ದಾರೆಂದು ಹೇಳಿದರೆ ಸಾಕು.

ಕೆ. ಕೃಷ್ಣಮೂರ್ತಿ ಮತ್ತು ತೀ. ನಂ. ಶ್ರೀ ಅವರಿಬ್ಬರೂ ವ್ಯಕ್ತಪಡಿಸು ತ್ತಿರುವುದರಲ್ಲಿ ಸಮಾನವಾದ ಅಂಶ, ಕವಿರಾಜಮಾರ್ಗಕಾರ ಕರ್ಣಾಕರ್ಣಿಯಾಗಿ ಕೇಳಿದ್ದ ಅಂಶವೆಂಬುದು ಇನ್ನೂ ತೀ. ನಂ. ಶ್ರೀ ಈ ಕಂದದ ಅರ್ಥದಲ್ಲಿ ನಿರ್ಣಯಕ್ಕೆ ಬರದೆ ಹೋಗಿದ್ದಾರೆ. ಆದರೆ, ಕೃಷ್ಣಮೂರ್ತಿ (ಉದಾಹರಣೆ ಮೂಲಕ) ಅದರ ಹಿಂದಿರುವ ಅಂಶ 'ಧ್ವನಿ' ಒಂದು ಅಲಂಕಾರವೇ ಹೊರತು, ಅದು ಕಾವ್ಯದ ಆತ್ಮ ವಾಗಲು 'ಸಾಧ್ಯವಿಲ್ಲ' ಎಂದು ಸೂಚಿಸುತ್ತಿರುವಂತೆ ತೋರುತ್ತಿದೆಯೆಂದು ಹೇಳಿ ದ್ದಾರೆ. ಯಾವುದು ತೀ. ನಂ. ಶ್ರೀ ಅವರಿಗೆ ಪೇಚಾಟವಾಯಿತೋ ಕೃಷ್ಣಮೂರ್ತಿ ಯವರು ಅದನ್ನೂ ಸ್ವಲ್ಪ ವಿವರಣೆ ನೀಡಲು ಹೋಗಿದ್ದಾರೆ. ಇವರ ಜೊತೆಗೆ ಇನ್ನೂ ಹಲವು ವಿದ್ವಾಂಸರು ಚರ್ಚಿಸಿದ್ದಾರೆ.

'ಧ್ವನ್ಯಲಂಕಾರ'ವಾದದ ಈ ಬಗೆಗಿನ ಚರ್ಚೆ, ಕೇವಲ ವಿದ್ಯಾರ್ಥಿಗಳಿಗೆ ವ್ಯುತ್ಪತ್ತಿ ಸಾಧಕವೆಂಬುದನ್ನು ಒಪ್ಪಿಕೊಂಡು ಕಂದದಿಂದ ಹಲವು ಅರ್ಥಗಳನ್ನು ಹೊರಡಿಸಲು ಶ್ರಮಿಸಿದ್ದಾರೆ. ಪ್ರಸ್ತುತ 'ಕನ್ನಡ ಕಾವ್ಯಮೀಮಾಂಸೆ'ಯ ಹಿನ್ನೆಲೆ ಯಲ್ಲಿ ಈ ಕಂದದ ಬಗೆಗಿನ ಚರ್ಚೆಗಳು ಅವ್ಯಾಪ್ತಿ ಅರ್ಥದಿಂದಲೂ ಅತಿವ್ಯಾಪ್ತಿಯ ವ್ಯಾಖ್ಯಾನದಿಂದಲೂ ಬಳಕೆಯಾಗಿರುವುದು ವಿದ್ವಾಂಸರೂ, ಅರ್ಥವ್ಯಾಖ್ಯಾನಿಗಳೂ ಜಿಜ್ಞಾಸುಗಳೂ ಎಲ್ಲೆಲ್ಲೋ ಹೊರಟಿದ್ದಾರೆ. ಯಂ. ಕೃಷ್ಣಶರ್ಮ ಅವರು ಇದನ್ನು "ಅಖಿಲಭಾರತಮಟ್ಟದ ವಿದ್ವದ್ವೇದಿಕೆಯಲ್ಲಿ ಚರ್ಚೆಗೆ ಯೋಗ್ಯವಾಗಿದೆ" ಎಂದು ಹೇಳಿರುವುದು ಕನ್ನಡದ ಸಂದರ್ಭದಿಂದ ಸರಿಯಾದರೂ, ಸಮರ್ಪಕವೂ ಐತಿಹಾಸಿಕವೂ ಆಧಾರವೇ ಇಲ್ಲದೆ ಬರಿ ಕೆಲವು ಊಹೆಗಳಿಂದಲೇ 'ಧ್ವನಿ'ಯ ಬಗೆಗಿನ ಚರ್ಚೆಯನ್ನು ವಾಸ್ತವಿಕಾರ್ಥ ಬೇರೆ ಏನೋ ಇದೆಯೆಂದು ಭ್ರಮಿಸುವುದು ಅಷ್ಟು ಸರಿಯಾಗಲಾರದೆಂಬುದು ನನ್ನ ನಂಬುಗೆ. ಹೀಗಾಗಿ ಚರ್ಚೆ ಇಷ್ಟು ಸಾಕೆಂದು ತೋರುತ್ತದೆ.

ಒಂದಂತೂ ಈ ಪುಸ್ತಕದಲ್ಲಿ ಸೇರಿರುವುದು ಸಂತೋಷ. 'ಧ್ವನಿ'ಯ ಬಗೆಗಿನ ಎಲ್ಲ ಬಗೆಯ ಚರ್ಚೆಗಳೂ ಕನ್ನಡ ನಾಡಿನ ವಿದ್ವಾಂಸರು ಎಲ್ಲ ಮಾಡಿರುವ ಚರ್ಚೆಗಳನ್ನೂ ಇಲ್ಲಿ ಕಾಣಬಹುದು. ಅವುಗಳಿಗೆ ಸಂಕಲನಕಾರರ ಟೀಕೆ, ಟಿಪ್ಪಣಿ-ಕೆಲವೊಮ್ಮೆ ಪ್ರತಿ ಟೀಕೆಗಳಿಗಾಗಿ, ಪುನರ್ ವ್ಯಾಖ್ಯಾನಗಳಾಗಿ, ತಿದ್ದುಪಡಿಗಳಾಗಿ-ಕಾಣಿಸ, ತ್ತವೆ. ಸಂಕಲನಕಾರ ಶ್ರೀ ಕೃಷ್ಣಶರ್ಮರ ವಿಶ್ಲೇಷಣೆ, ವಿದ್ವತ್ತು, ಪ್ರಶಂಸನೀಯ. ಹೆಚ್ಚಿನ ವ್ಯಾಸಂಗಕ್ಕೆ ಪುಸ್ತಕವನ್ನೇ ಗಮನಿಸುವುದು ಸೂಕ್ತ.

**ಕವಿರಾಜ ಮಾರ್ಗದ ಧ್ವನಿಯೆಂಬುದಳಂಕಾರಂ**— (ಧ್ವನ್ಯಲಂಕಾರವಾದ) ಸಂ: ಯ. ಕೃಷ್ಣಶರ್ಮ, ಪುಟ 136, ಜಿಲೆ ರೂ. 15, ಪ್ರಸಾದ ಪ್ರಕಾಶನ, 3, ಶ್ರೀ ಸುಬ್ರಹ್ಮಣ್ಯಸ್ವಾಮಿ ಮಂದಿರಂ, ವಿಶ್ವೇಶ್ವರಪುರಂ, ಬೆಂಗಳೂರು—560004)

**ಕಲೆ/ಕಲಾವಿದ**

# ಕ್ಯುಬಿಸಂ ಚಳವಳಿಗೆ ನಾಂದಿಯಾದ ಪಿಕಾಸೋ ಕೃತಿ

—ಚಿ. ಸು. ಕೃಷ್ಣಸೆಟ್ಟಿ

ಅನ್ವೇಷಣೆಯ ಸಂಚಿಕೆ 36ರ ಮುಖಪುಟ*ದಲ್ಲಿ ಪ್ರಕಟವಾದ ಪಿಕಾಸೋವಿನ ಕಲಾಕೃತಿಯ ಶೀರ್ಷಿಕೆ 'ಲೆ ದಮಾಸ್ವೆಲ್ ದವಿನ್ಯೋ' (ಫ್ರೆಂಚ್‌ನಲ್ಲಿ Les Demoi ssellesd' Avignon.) ಇದನ್ನು ನಮ್ಮ ಶಿವರಾಮ ಕಾರಂತರು 'ಎವಿಗ್ನಾನಿನ ನಾರಿಯರು' ಎಂದು ತರ್ಜುಮೆ ಮಾಡಿದ್ದಾರೆ (ಪುಟ 343, ಕಲಾ ಪ್ರಪಂಚ). ಈ ಕೃತಿಯ ಮೂಲಕ ಪಿಕಾಸೋ ಅತ್ಯಂತ ಪ್ರಸಿದ್ಧಿಪಡೆದನಲ್ಲದೆ ನವ್ಯಕಲಾ ಚಳುವಳಿಯ ಮುಂಚೂಣಿಯಲ್ಲಿ ತಾನು ಇರುವುದನ್ನು ಸಾಬೀತುಗೊಳಿಸಿದ ಹಾಗೂ ಕಲೆ, ಒಪ್ಪಿತ ಸಾಂಪ್ರದಾಯಿಕ ಮೌಲ್ಯಗಳ ಬಂಧನದಿಂದ ಬಿಡುಗಡೆ ಪಡೆದದ್ದನ್ನು ಘೋಷಿಸಿದ.

ಈಗ ನ್ಯೂಯಾರ್ಕಿನ ಮ್ಯೂಸಿಯಂ ಆಫ್ ಮಾಡರ್ನ್ ಆರ್ಟ್‌ನ ಸಂಗ್ರಹದಲ್ಲಿರುವ ಈ ಕೃತಿ 96×92 ಇಂಚುಗಳ ಅಳತೆಯದು. ಪಿಕಾಸೋ 25 ವರ್ಷ ವಯಸ್ಸಿನವನಾಗಿದ್ದಾಗ ಅಂದರೆ 1907ರಲ್ಲಿ ಇದನ್ನು ರಚಿಸಿದ. ಇದು ಆದಿವಾಜನಾಂಗದ ಕಲೆ ಹಾಗೂ ಸಮಕಾಲೀನ ಕಲೆಯ ಸಂಧಿ ಸ್ಥಳ ಎನ್ನುವಂತಿದ್ದು ಇವೆರಡೂ ಪದ್ಧತಿಗಳನ್ನು ಬೇಧಿಸಿ ಹೊಸದೊಂದು ಶೈಲಿಯನ್ನು, ಆಯಾಮವನ್ನು ಸೃಷ್ಟಿಸಿತು.

ಈ ಕೃತಿಯ ಶೀರ್ಷಿಕೆ ಫ್ರಾನ್ಸಿನ ಕೆಂಪು ದೀಪ ಜಿಲ್ಲೆಯಾದ ಜಾರ್ಸಿಲೋನಾದ ಬೀದಿಯೊಂದರಿಂದ ಬಂದಿದೆ. ಕಾಮುಕರನ್ನು ಆಹ್ವಾನಿಸುತ್ತ ಮೂರ್ತಿಗಳಂತೆ

* ಇದೇ ಸಂಚಿಕೆ ರಕ್ಷಾಪುಟ 4 ನೋಡಿ.

ನಿಂತಿರುವ ಈ ಐವರೂ ಸೂಳೆಯರು. ಪಿಕಾಸೋ ತನ್ನ 'ರೋಸ್ ಸೀರಿಯಡ್' ನಲ್ಲಿ ಸರ್ಕಸ್ ಜನರ ಬವಣೆಗೆ ಒತ್ತಾಸೆ ನೀಡಿದ್ದ. ಅದೇ ಅವಧಿಗೆ ಸಮೀಪದಲ್ಲಿರುವ ಈ ಕೃತಿ ಸೂಳೆಯರ ಬವಣೆಯನ್ನು ಕುರಿತದ್ದು ಆಗಿರಬಹುದು. ಮಧ್ಯದಲ್ಲಿರುವ ಇಬ್ಬರು ಹೆಂಗಳೆಯರ ಮುಖಗಳು ನೇರವಾಗಿ ನಮ್ಮನ್ನು ನೋಡುತ್ತಿವೆ. ಆದರೆ ಅವುಗಳ ಮೂಗುಗಳನ್ನು ಪಾರ್ಶ್ವ ಚಿತ್ರದಲ್ಲಿ ಕಾಣುವಂತೆ ಚಿತ್ರಿಸಿದ್ದಾನೆ. ಪರದೆ ಸರಿಸುತ್ತಿರುವ ಹಾಗೂ ಕುಳಿತಿರುವ ಉಳಿದಿಬ್ಬರು ನಮ್ಮನ್ನು ಬೆಚ್ಚು ಬೀಳಿಸುವಂತಹ ಮುಖವಾಡಗಳನ್ನು ಧರಿಸಿದ್ದಾರೆ. ಕುಳಿತಿರುವ ಹೆಂಗಸು ನಮಗೆ ಬೆನ್ನು ತೋರಿಸಿ ಕುಳಿತಿದ್ದರೂ ಮುಖವನ್ನು ಮಾತ್ರ ಎದುರಿನಿಂದ ನೋಡುತ್ತಿರುವಂತೆ ಚಿತ್ರಿಸಿದ್ದಾನೆ. ಅರೆನಗ್ನರಾಗಿರುವ ಈ ಐವರೂ ಮೇಲ್ನೋಟಕ್ಕೆ ಜಡ ವಸ್ತುಗಳಂತೆ ಕಂಡರೂ ನಮ್ಮನ್ನೇ ತೀಕ್ಷ್ಣವಾಗಿ ದಿಟ್ಟಿಸಿ ನೋಡುತ್ತಿದ್ದಾರೆ; ವಿಲಕ್ಷಣವಾದ ಆದಿಮ ಚೇತನ ಪೂರ್ಣವಾಗಿದ್ದಾರೆ. ಇವರು ನಿಂತಿರುವ ಭಂಗಿಗಳು ನಮ್ಮ ಚಲನಚಿತ್ರಗಳಲ್ಲಿ ತೋರಿಸುವ ಕೆಂಪು ದೀಪದ ರಸ್ತೆಗಳಲ್ಲಿನ ಯುವತಿಯರ ಭಂಗಿಗಳನ್ನು ಹೋಲುತ್ತದೆ.

ಈ ಕೃತಿಯಲ್ಲಿ ಪಿಕಾಸೋ, ಸಂಪೂರ್ಣ ಬೇರೆಯದಾದ ಹಲವು ಶೈಲಿಗಳನ್ನು ಸಂಲಗ್ನಗೊಳಿಸಿದ. ಆ ಕಾಲಕ್ಕೆ ಇದನ್ನು ತಿರೀಕ್ಷಿಸುವುದು ಸಾಧ್ಯವಿರಲಿಲ್ಲ. ಹಾಗಾಗಿ ಇದು ಅತ್ಯಂತ ಮಹತ್ವವನ್ನು ಪಡೆಯಿತು. ಚಿತ್ರದ ಎಡಭಾಗದಲ್ಲಿರುವ ಮೂವರು ಹೆಂಗಳೆಯರ ಮುಖಗಳನ್ನು ಐಬೀರಿಯನ್ ಶಿಲ್ಪಗಳಂತೆ ರೂಪಿಸಿದ್ದಾನೆ. ಉಳಿದ ಎರಡು ಹೆಂಗಳೆಯರ ಮುಖಗಳನ್ನು ಇದರಿಂದ ಸಂಪೂರ್ಣ ಭಿನ್ನವಾಗಿ ರಚಿಸಿದ್ದಾನೆ. ಇವುಗಳನ್ನು ಆಗ ಪ್ಯಾರಿಸ್ಸಿನ ಮಾರುಕಟ್ಟೆಯಲ್ಲಿ ದೊರೆಯುತ್ತಿದ್ದ ಆಫ್ರಿಕದ ಆದಿವಾಸಿ ಜನಾಂಗದ ಮುಖವಾಡಗಳು ಹಾಗೂ ಆಸ್ಟ್ರೇಲಿಯಾದ ಪೂರ್ವಕ್ಕಿರುವ ಪಾಲಿನೇಷಿಯಾ ದ್ವೀಪಗಳ ಶಿಲ್ಪಗಳ ಪ್ರೇರಣೆಯಿಂದ ರಚಿಸಿದ್ದಾನೆ. ಇಲ್ಲಿ ಒಂದೇ ಮುಖವನ್ನು ಹಲವಾರು ಕೋನಗಳಲ್ಲಿ, ಏಕಕಾಲದಲ್ಲಿ ನೋಡಿದಂತೆ ವಿಕಾರವಾಗಿ ಚಿತ್ರಿಸಿದ್ದಾನೆ. ವರ್ಣಗಳನ್ನು ಒರಟಾಗಿ ಹಚ್ಚಿದ್ದಾನೆ. ಬಿರುಸಾದ ಕೋನಗಳು ಹಾಗೂ ವ್ಯಕ್ತಿಗಳ ಆಕಾರದಲ್ಲಿನ ವಿರೂಪಗಳ ಅನ್ವೇಷಣೆಯೇ ಮುಂದೆ ಆಧುನಿಕ ಕಲಾಕ್ಷೇತ್ರದಲ್ಲಿ ಭಾರೀ ಪರಿಣಾಮವನ್ನುಂಟು ಮಾಡಿದ 'ಕ್ಯುಬಿಸಂ'ಗೆ ದಾರಿ ಮಾಡಿಕೊಟ್ಟಿತು. ಈ ಕೃತಿಯಲ್ಲಿ ಸೆಜಾನನ ಪ್ರಭಾವವನ್ನು, ರೋಮನ್ ಪ್ರಭಾವಿತ ಕ್ಯಾಟಲೋನಿಯಾದ ಕಲೆಯ ಪ್ರಭಾವವನ್ನು ಕೆಲವರು ಗುರ್ತಿಸಿದ್ದಾರೆ. ವಿಶೇಷತಃ ಅವಯವಗಳಲ್ಲಿ 16ನೆಯ ಶತಮಾನದ ಸ್ಪೈನಿನ ಕಲೆ (ವಿಶೇಷತಃ ವಿಲಕ್ಷಣವಾದಿ ಎಲ್‌ಗ್ರೇಕೊ) ಇವುಗಳ ಪ್ರಭಾವವನ್ನೂ ಕೆಲವು ವಿಮರ್ಶಕರು ಆರೋಪಿಸಿದ್ದಾರೆ.

ಪಿಕಾಸೋ ಒಮ್ಮೆ ಹೇಳಿದ್ದ. "ಸಾಂಪ್ರದಾಯಿಕ ಕೃತಿಗಳಲ್ಲಿ ಕಂಡು ಬರುವಂತಹ ಮಾನವನ ಅವಯವಗಳನ್ನು ಸಂಗ್ರಹಿಸಿ, ಪುನರ್ಜೋಡಿಸಿ, ಅದರಿಂದ

ಅವನಿಗೇ ಅರಿವಿಲ್ಲದಂತಿರುವ ಹಾಗೂ ಅದು ಎಬ್ಬಿಸುವ ಪ್ರಶ್ನೆಗಳಿಂದ ತಪ್ಪಿಸಿಕೊಳ್ಳಲು ಅಸಾಧ್ಯವೆನ್ನಿಸುವಂತಹ ಪ್ರತಿಮೆ (Image)ಯನ್ನು ನಾನು ಮಾನವನಿಗೆ ನೀಡುತ್ತೇನೆ". ಪಿಕಾಸೋ ತನ್ನ ಮಾತನ್ನು ನೆರವೇರಿಸಲು ಈ ಕೃತಿಯ ಮೂಲಕ ಆರಂಭಿಸಿದ. "ಈ ಚಿತ್ರ ಒಡೆದ ಕನ್ನಡಿಯ ಚೂರುಗಳ ಜೋಡಣೆಯಂತಿದೆ" ಎಂದು ಒಬ್ಬ ವಿಮರ್ಶಕ ಹೇಳಿರುವುದನ್ನು ಇಲ್ಲಿ ನೆನಪಿಸಿಕೊಳ್ಳಬಹುದು.

ಇದರ ಮೂಲಕ ಪಿಕಾಸೊಗೆ ಅಂದಿನವರೆಗೆ ಪ್ರಚಲಿತವಿದ್ದ ಸಾಂಪ್ರದಾಯಿಕ ವಾದ, ವಾಸ್ತವಿಕತೆಯ ಭ್ರಮೆಯನ್ನು ತರುವ ಅಂಶಗಳನ್ನು ಧಿಕ್ಕರಿಸಿದ. ಅವುಗಳಲ್ಲಿ ಮುಖ್ಯವಾದುವು ಎರಡು. ಮೊದಲನೆಯದು ನೆರಳು ಬೆಳಕಿನ ಯೋಜನೆ. ಇಡೀ ಕೃತಿಯಲ್ಲಿ ಎಲ್ಲಿಯೂ ಛಾಯಾ ಚಿತ್ರಗಳಲ್ಲಿ ಕಂಡು ಬರುವಂತಹ ವಾಸ್ತವಿಕ ಛಾಯಾಂತರ (shading) ಇಲ್ಲ. ಒಂದೆರಡು ಕಡೆ ಕೆಲವು ಭಾರತೀಯ ಬಿಕಣಿ ಚಿತ್ರಗಳಲ್ಲಿ ಕಂಡು ಬರುವಂತೆ ಚಪ್ಪಟೆಯಾದ (flat) ವರ್ಣಗಳನ್ನು ಹಚ್ಚಿದ್ದಾನೆ. ಛಾಯಾಂತರ ವಿರುವೆಡೆಯೂ ಅದು ವಾಸ್ತವಿಕತೆಯಿಂದ ದೂರವಿರುವಂತಹುದು. ಕೆಲವೆಡೆ ಸ್ಪಷ್ಟವಾದ ರೇಖೆಗಳಿಂದ ಆಕಾರಗಳನ್ನು ಸ್ಪಷ್ಟಪಡಿಸಿದ್ದಾನೆ. ಎರಡನೆಯದು ದೃಗ್ದರ್ಶನ ನಿಯಮ (perspective) ದೃಗ್ದರ್ಶನ ಹಾಗೂ ಅವಯುವಗಳ ಆಕಾರಗಳಲ್ಲಿ ಈ ಹಿಂದಿಲ್ಲದ ಮಾದರಿಯನ್ನು ಅನುಸರಿಸಿದ. ಹಿನ್ನೆಲೆಯ ಯೋಜನೆಯೂ ವಿಶಿಷ್ಟವಾದುದು. ವ್ಯಕ್ತಿಗಳಿಗೆ ಸುಡಾವೆ ಮಣ್ಣಿನಂತಹ ವರ್ಣಗಳನ್ನು ಹಚ್ಚಿದ್ದಾನೆ. ಐಬೀರಿಯನ್ ಶಿಲ್ಪಗಳಂತಹ ಮುಖಗಳಲ್ಲಿ ಒಂದು ಕಣ್ಣನ್ನು ವಾಸ್ತವಿಕತೆಯಿಂದ ದೂರವಾದಂತೆ ಮೇಲೆ ಬರೆದಿದ್ದಾನೆ.

ಹೀಗೆ ಈ ಕೃತಿ ಸ್ವೀಕೃತ ಹಾಗೂ ಒಪ್ಪಿತ ಸಿದ್ಧಾಂತಗಳ ಮೇಲೆ ಭಾರೀ ಧಾಳಿ ನಡೆಸಿ ಕಲಾಕ್ಷೇತ್ರದಲ್ಲಿ ವಿವಾದವನ್ನುಂಟುಮಾಡಿತು. ಮಾತಿಸ್ ಸೇರಿದಂತೆ ಪಿಕಾಸೋವಿನ ಹತ್ತಿರದ ಸ್ನೇಹಿತರಿಗೂ ಈ ಕೃತಿ ಆಘಾತವನ್ನುಂಟು ಮಾಡಿತು. 1907ರ ಸೆಪ್ಟೆಂಬರ್‌ನಲ್ಲಿ ಜಾರ್ಜ್ ಬ್ರಾಕ್ (ಮುಂದೆ ಪಿಕಾಸೋವಿನ ಜೊತೆ ಸೇರಿಕೊಂಡು ಕ್ಯೂಬಿಸಂ ಚಳವಳಿಯ ನೇತಾರನಾದವನು), ಪಿಕಾಸೋವಿನ ಭೇಟಿ ಮಾಡಿ ಈ ಕೃತಿ ನೋಡಿದಾಗ ಅದರ ವಿಧ್ವಂಸಕ ಮನೋಭಾವ ಹಾಗೂ ವಿಕಾರಗಳಿಂದ ಸ್ತಂಭೀಭೂತನಾದ. ಅದಾದ ಎಂಟು ತಿಂಗಳ ನಂತರ ಇದರ ಪ್ರೇರಣೆಯಿಂದ standing nude ಎನ್ನುವ ಕೃತಿ ರಚಿಸಿದ ಹಾಗೂ ಕ್ಯೂಬಿಸಂನ ಆರಂಭವನ್ನು ಘೋಷಿಸಿದ.

ಪಿಕಾಸೋ, ಈ ಕೃತಿಯನ್ನು ಆರಂಭಿಸುವ ಮೊದಲು ಹಲವಾರು ಪೂರ್ವಾಭ್ಯಾಸಗಳನ್ನ ನಡೆಸಿದ. (ಗರ್ನಿಕಾದಂತಹ ಇವನ ಹಲವಾರು ಖ್ಯಾತ ಕೃತಿಗಳ ಸಂದರ್ಭದಲ್ಲೂ ಈ ಮಾತು ಹೇಳಬಹುದು.) ಮೂಲದಲ್ಲಿ ನಾವಿಕನೊಬ್ಬನ ತಲೆಬುರಡೆ ಹಿಡಿದ ವೈದ್ಯ ವಿದ್ಯಾರ್ಥಿಯೊಬ್ಬನ ಚಿತ್ರಗಳನ್ನು ಇದರಲ್ಲಿ ಸೇರಿಸಲು ಯೋಚಿಸಿದ್ದ.

ಆದರೆ ಕೊನೆಗೆ ಸಂಯೋಜನೆಯಲ್ಲಿ ಕುತೂಹಲ ಕಡಿಮೆಯಾಗುತ್ತದೆಂದು ಅದನ್ನು ಕೈಬಿಟ್ಟನಂತೆ. ಈ ಕೃತಿ ಬೆಳೆಯುತ್ತ ಹೋದಂತೆ ಪಿಕಾಸೋ ಆರಂಭದ ಮನಸ್ಸಿನಲ್ಲಿದ್ದ ಸೂಳೆಮನೆಯ ದೃಶ್ಯವನ್ನು ಈ ಹಿಂದೆ ಹೇಳಿದ ಆಫ್ರಿಕನ್ ಕಲೆಯ ಬೆಚ್ಚು ಬೀಳಿಸುವಂತಹ ಪ್ರತಿಮೆಗಳಿಂದ ಪರಿವರ್ತಿಸಿದ. ಪಕ್ಕದ ಎರಡು ವ್ಯಕ್ತಿಗಳನ್ನು ನಂತರ ಸೇರಿಸಿದುದಾಗಿಯೂ ಪಿಕಾಸೋ ಒಮ್ಮೆ ಹೇಳಿದ್ದಾನೆ. ಚಿತ್ರದ ಮುನ್ನೆಲೆಯಲ್ಲಿರುವ ಹಣ್ಣನ್ನು ಸಾಂಕೇತಿಕವಾಗಿ ಬಳಸಿಕೊಂಡಿದ್ದಾನೆ. ಎಲ್ಲ ಜೀವಿಗಳೂ ಕಳಿತ ಹಣ್ಣಿನಂತೆ ಕ್ರಮೇಣ ವಿನಾಶ ಹೊಂದುತ್ತವೆ ಎನ್ನುವುದು ಇದರ ಧ್ವನಿ.

ಇದರಲ್ಲಿ ಜಾಮಿತೀಯ ಆಕಾರಗಳಿದ್ದರೂ ಇದನ್ನು ಕ್ಯೂಬಿಸಂನ ಲಕ್ಷಣಗಳಿರುವ ಕೃತಿ ಎನ್ನುತ್ತಾರೆಯೇ ಹೊರತು ಕ್ಯುಬಿಸ್ಟ್ ಚಿತ್ರ ಎನ್ನುವುದಿಲ್ಲ. ವಕ್ತಿಗಳ ಹಾಗೂ ವಸ್ತುಗಳ ಆಕಾರಗಳನ್ನು ಒಡೆದು, ಪುನಸ್ಸೃಷ್ಟಿಸುವ ಕಲ್ಪನೆ, ಈ ಕೃತಿಯು ಮುಂದಿನ ಕಲಾವಿದರಿಗೆ ನೀಡಿದ ಭಾರೀ ಕೊಡುಗೆ. ನಂತರ ಇದರಿಂದ ಪಡೆದುಕೊಂಡ ಸಂಗತಿಗಳಿಂದ ಹಲವಾರು ಚಳವಳಿಗಳು ರೂಪುಗೊಂಡಿವೆ ; ಆಧುನಿಕ ಕಲೆಯ ದಿಕ್ಕೇ ಬದಲಾಗಿದೆ. ಈ ಎಲ್ಲ ಸಂಗತಿಗಳಿಂದ ಆಧುನಿಕ ಕಲೆಯ ಇತಿಹಾಸದಲ್ಲಿ ಇದಕ್ಕೆ ಅದ್ವಿತೀಯ ಸ್ಥಾನವಿದೆ.

(ಹಲವಾರು ಮಿತಿಗಳಿಂದಾಗಿ ಈ ಕೃತಿಯ ಪುನರ್ಮುದ್ರಣ ಇಲ್ಲಿ ಚೆನ್ನಾಗಿ ಮೂಡಿಬಂದಿಲ್ಲ. ಕನಿಷ್ಟ ಮೇಲಿನ ಅಂಶಗಳನ್ನು ಗ್ರಹಿಸಲು ವಿದೇಶೀ ಪುಸ್ತಕಗಳಲ್ಲಿ, ಆಫ್‌ಸೆಟ್‌ನಲ್ಲಿ, ಬಹುವರ್ಣಗಳಲ್ಲಿ ಮುದ್ರಿತವಾಗಿರುವ ಪ್ರತಿಗಳನ್ನಾದರೂ ನೋಡಿದರೆ ಒಳಿತು ಎಂದು ನನ್ನ ಅನಿಸಿಕೆ.)

## ಪುಸ್ತಕ ಸ್ವೀಕಾರ

o **ಸಮೂಹದಿಂದ ಸಮೂಹಕ್ಕೆ** ಬೀದಿ ನಾಟಕ, ಲೇ : ಜಿ. ಎನ್. ಮೋಹನ್, ಪುಟ 64, ಬೆಲೆ ರೂ. 7, ಪ್ರ: ಪ್ರಯೋಗರಂಗ, ಭಾರತ ಯಾತ್ರಾ ಕೇಂದ್ರ, ನಂ. 25, ಅಗ್ರಹಾರ ದಾಸರಹಳ್ಳಿ, ಮಾಗಡಿರಸ್ತೆ, ಬೆಂಗಳೂರು-560079.

o **ಋತು ವಿಲಾಸ** (ಮೂಲ : ಕಾಳಿದಾಸನ ಋತು ಸಂಹಾರ) ಕವಿ : ಡಾ. ಎಚ್. ಎಸ್. ವೆಂಕಟೇಶಮೂರ್ತಿ, ಪುಟ 74, ಬೆಲೆ ರೂ. 12, ಸುವಿದ್ಯಾ ಪ್ರಕಾಶನ, 7, ಸರ್ವೇಯರ್‌ರಸ್ತೆ, ಬಸವನಗುಡಿ, ಬೆಂಗಳೂರು-560004.

o **ಆಸೆ** (ಕವನ ಸಂಕಲನ) ಕವಿ: ಪ್ರಭು ಖಾನಾಪುರೆ, ಪುಟ 50, ಬೆಲೆ ರೂ. 10, ಸಮತಾ ಪ್ರಕಾಶನ, ಸರಸಂಬಾ, ತಾ॥ ಆಳಂದ, ಜಿ. ಗುಲಬರ್ಗಾ.

o **ಅಥ್ಯಾನಪುರ** (ನಾಟಕ) ಲೇ: ಎಚ್. ಡುಂಡಿರಾಜ್, ಪುಟ 61, ಬೆಲೆ. ರೂ.10, ಅಭಿವ್ಯಕ್ತ ಪ್ರಕಾಶನ, ಫಾತಿಮಾ ಗಾರ್ಡನ್ಸ್, ವೆಲೆನ್ಸಿಯಾ, ಮಂಗಳೂರು-2

o ಕೊಂಡಿಗಳು ಮತ್ತು ಮುಳ್ಳು ಬೇಲಿಗಳು (ಕವನ ಸಂಕಲನ) ಕವಿ : ಬಿ. ಚಿನ್ನಸ್ವಾಮಿ, ಪುಟ 66, ಬೆಲೆ ರೂ. 10, ಭಾಗ್ಯ ಪ್ರಕಾಶನ, ರಾಜಾಜಿನಗರ, ಬೆಂಗಳೂರು-560010.

o ದಾಂಪತ್ಯ ಗಾಥೆ ಲೇ : ಬಿ. ಮಾಲಿನಿ ಮಲ್ಯ, ಪುಟ-66, ಬೆಲೆ ರೂ. 12, ಸಪ್ನ ಬುಕ್ ಸ್ಟಾಲ್, ಗಾಂಧೀನಗರ, ಬೆಂಗಳೂರು-560009.

o ಕನ್ಯಾಕುಮಾರಿ (ಕವನ ಸಂಕಲನ) ಬಿ. ನಾರಾಯಣಮ್ಮ, ಪುಟ 48, ಬೆಲೆ ರೂ. 5, ರಜತಾದ್ರಿ ಪ್ರಕಾಶನ, ಪಶ್ಚಿಮ ಕಾರ್ಡ್‌ರಸ್ತೆ, ಬೆಂಗಳೂರು-560086.

o ನೆಲ್ಸನ್ ಮಂಡೇಲಾ (ಜೀವನ ಮತ್ತು ಹೋರಾಟ) ಲೇ : ಬೋರಿಸ್ ಅಸೊಯಾನ್, (ಅನು : ಸಿ. ಸೀತಾರಾಮ್) ಪುಟ 74, ಬೆಲೆ ರೂ. 8,

o ಅರ್ನೆಸ್ಟೊ ಚೆ ಗುವಾರ, ಮೂಲ : ಐ. ಲಾವ್ರೆತ್‌ಸ್ಕಿ (ಅನು : ಗೊ.ರು. ಚನ್ನಬಸಪ್ಪ, ಸೂರ್ಯಕಾಂತ ಸೊನ್ನದ, ಕೆ. ಪಿ. ಸ್ವಾಮಿ), ಪುಟ 510, ಬೆಲೆ ರೂ. 40.

o ಇತಿಹಾಸದ ಕಣ್ಣಲ್ಲಿ ರಾಮಾಯಣ, ಮೂಲ : ಎಚ್. ಡಿ. ಸಂಕಾಲಿಯಾ (ಸಂಗ್ರಹಾನುವಾದ : ಮಹಾಬಲೇಶ್ವರರಾವ್ ಪುಟ 174, ಬೆಲೆ ರೂ. 18.

o ಮದ್ಯಪಾನ—ಸಂತೋಷ ವ್ಯಸನ ಯಾವುದುಂ ಸರಿ ? ಲೇ : ಕೆ. ಪಿ. ಸ್ವಾಮಿ, ಪುಟ 76. ಬೆಲೆ ರೂ. 8.

o ಸೂಪರ್‌ನೋವಾ (ವಿಜ್ಞಾನ) ಲೇ : ಜಿ. ಟಿ. ನಾರಾಯಣರಾವ್, ಪುಟ 140, ಬೆಲೆ ರೂ. 20.

o ಸೋವಿಯತ್ ರಶಿಯಾದಲ್ಲಿ ಭಾರತದ ಕ್ರಾಂತಿಕಾರಿಗಳು ಎಂ.ಎ.ಪರ್ಸಿತ್ಸ್ ಸಂ : ಪ್ರೊ॥ ಆರ್. ಎ. ಉಲ್ಯಾನೊವ್‌ಸ್ಕಿ, (ಅನು : ಸೂರ್ಯಕಾಂತ ಸೊನ್ನದ) ಪುಟ 462. ಬೆಲೆ ರೂ. 40.

o ಸಾಮಾಜಿಕ ರಾಜಕೀಯ ಜ್ಞಾನದ ಮೂಲ ಪಾಠಗಳು :

1. ಸಮಾಜವಾದ ಎಂದರೆ ಏನು ? ಮೂಲ : ಡಿ. ಕ್ಲಿಮೆಂತ್ಯೆವ್, ಟಿ. ವಸೀಲ್ಯೆವ್, (ಅನು : ಟಿ. ಸಿ. ಉಮಾಪತಿ) ಪುಟ 240, ಬೆಲೆ ರೂ. 9.

2. ವೈಜ್ಞಾನಿಕ ಕಮ್ಯುನಿಸಂ ಎಂದರೇನು ? ಮೂಲ : ಎಲ್. ಸೆಲೆಜ್ನೋವ್ ವಿ. ಫೆತೀಸೋವ್, (ಅನು : ಟಿ. ಸಿ. ಉಮಾಪತಿ) ಪುಟ 240, ಬೆಲೆ ರೂ. 9.

3. ಮಿಗುತಾಯ ಮೌಲ್ಯ ಎಂದರೆ ಏನು ?
ಮೂಲ : ಎಫ್. ವೋಲ್ಕೊವ್, ಟಿ. ವೋಲ್ಕೊವ್, (ಅನು : ಕೆ. ಎಲ್. ಗೋಪಾಲಕೃಷ್ಣರಾವ್ ಪುಟ 352, ಬೆಲೆ ರೂ. 13.

—ಕೊನೆಯ ಮೂರು ಪುಸ್ತಕಗಳು ಪ್ರಗತಿ ಪ್ರಕಾಶನ, ಮಾಸ್ಕೋ ಪ್ರಕಟಣೆಗಳು.

ಮೇಲಿನ ಉಳಿದ ಆರು ಪುಸ್ತಕಗಳ ಪ್ರಕಾಶಕರು : **ನವ ಕರ್ನಾಟಕ ಪ್ರಕಾಶನ**, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು-**560001.**

o ಕಲೆ ಮತ್ತು ರಸಾಸ್ವಾದನೆ, ಸಂ: ಪ್ರೊ॥ ಎಂ. ಎಚ್. ಕೃಷ್ಣಯ್ಯ, ಪುಟ 118, (10 ಕಲಾಚಿತ್ರಗಳು) ಬೆಲೆ ರೂ. 5.

o **ಎನ್. ಎಚ್. ಕುಲಕರ್ಣಿ**, ಲೇ: ಪ್ರೊ॥ ಎಂ. ಎಚ್. ಕೃಷ್ಣಯ್ಯ, ಪುಟ ? ಬೆಲೆ ರೂ. 6,

ಈ ಮೇಲಿನ ಎರಡೂ ಪುಸ್ತಕಗಳ ಪ್ರಕಾಶಕರು :
**ಕರ್ನಾಟಕ ಲಲಿತಕಲಾ ಅಕಾಡೆಮಿ**, ನೃಪತುಂಗರಸ್ತೆ, ಬೆಂಗಳೂರು-**2.**

---

# ಏನಾಗಿದೆ ?

---

ಏನಾಗಿದೆ ಕಾಶ್ಮೀರಕೆ ?
ಪಂಜಾಬಿಗೆ ಏನು ?
ನರಭಕ್ಷಕ ಹಿಡಿದಿದೆಯೆ ?
ಈ ಚೆಲುವಿನಧೇನು ? ೧

ಕೊಳದಾಚೆಯ ಹೊಳೆಯಾಚೆಯ
ಮಕಮಲ್ಲಿನ ಹಸಿರು
ಎಲ್ಲಿಯು ಹಗೆ ಎಲ್ಲಿಯು ಹೊಗೆ
ಒಣಗಿಸುತಿದೆ ಉಸಿರು ೨

ಬಿಳಿಬಟ್ಟೆಕೆ ಎಲ್ಲಿಯದೊ
ಈ ರಕ್ತದ ಕಲೆಯು
ಮನೆ ಮನೆಗಳ ಮರೆಯಲ್ಲೂ
ಜಪ್ಪಿಸುತಿದೆ ಹುಲಿಯು ೩

ನಸುಗೆಂಪಿನ ನರುಗಂಪಿನ
ಕಣಿವೆಯು ಹೂದಾರಿ
ಮಧು ಚಂದ್ರದ ಪಯಣಿಗರನು
ನಿಲಿಸಿದೆ ಹೌಹಾರಿ ೪

ಪ್ರಕೃತಿಯ ಹೂ ಬಾಡಿಸಿದೆ
ದ್ವೇಷದ ಈ ಬಿಸಿಲು
ಸ್ನೇಹದ ಕೈ ತೊಳೆದೀತೆ
ರಕ್ತದ ಈ ಕೆಸರು ೫

ಗೋದಿಯ ತೆನೆ ಹಾಲಿನ ಕೆನೆ
ಬಿಡಿಸಿರಲೀ ದ್ವೇಷ
ಅಲೆ ಅಲೆಗಳ ಬೆಳ್ಳಕ್ಕಿಯು
ಕಣ್ಮರೆಸಲಿ ರೋಷ ೬

ಕಡೆಗೋಲಿನ ತಾಯದಿರೆ
ಕುಡುಗೋಲಿನ ಬಂಧು
ತಡೆಹಿಡಿಯಿರಿ ಸೋದರಿಕೆಗೆ
ಗುರಿಯಿಟ್ಟಿಹ ಗುಂಡು ೭

—ಸು. ರಂ. ಎಕ್ಕುಂಡಿ

ANVESHANE MAG (5) PRB-DECL 127/85-86



ಪಿಕಾಸೋ ಕಲೆಯ ಕುರಿತು ಚಿ. ಸು. ಕೃಷ್ಣಸೆಟ್ಟಿ ಅವರ ಲೇಖನ ಒಳಪುಟದಲ್ಲಿ
(ಕಳೆದ ಸಂಚಿಕೆಯ ಮುಖಪುಟ ಚಿತ್ರವಿದು)

---

**'ಅನ್ವೇಷಣೆ' ಸಾಹಿತ್ಯ—ಸಾಂಸ್ಕೃತಿಕ ಚಟುವಟಿಕೆಗಳಿಗೆ ಮೀಸಲಾದ ಪತ್ರಿಕೆ**

ಚಂದಾ ವಿವರ : ವಾರ್ಷಿಕ ಚಂದಾ ರೂ. 35 (ವ್ಯಕ್ತಿಗಳಿಗೆ)
ರೂ. 50 (ಗ್ರಂಥಾಲಯಕ್ಕೆ)

ಆಜೀವ ಚಂದಾ ರೂ. 400 (ಒಂದು ಅಥವಾ ನಾಲ್ಕು ಕಂತು) ವ್ಯಕ್ತಿಗಳಿಗೆ
ರೂ. 500 ಸಂಸ್ಥೆ/ಗ್ರಂಥಾಲಯಕ್ಕೆ

ವಿಳಾಸ : ಸಂಪಾದಕ, "ಅನ್ವೇಷಣೆ", 478,
11ನೇ ಎಂ. ಸಿ. ಬಡಾವಣೆ ರಸ್ತೆ,
ವಿಜಯನಗರ, ಬೆಂಗಳೂರು–560040.

---

ಸಂಪಾದಕ/ಮುದ್ರಕ : ಆರ್. ಜಿ. ಹಳ್ಳಿ ನಾಗರಾಜ್, ಪ್ರಕಾಶಕರು : ಅರುಣ ಯುವ ಲೇಖಕರ ಬಳಗ, ಬೆಂಗಳೂರು-79. ಚೇತನ ಪ್ರಿಂಟರ್ಸ್, ಎಲ್. ಎನ್. ಪುರಂ, ಬೆಂಗಳೂರು-21